

# ಸಂಚಯ


ಸಾಂಸ್ಕೃತಿಕ ಪತ್ರಿಕೆ

ತ್ರೈಮಾಸಿಕ

ಸಂಪುಟ : ೧೧

ಸಂಚಿಕೆ ೨ (೫೫)

ಡಿಸೆಂಬರ್ -೨೦೦೧

*ಸಂಪಾದಕ*

ಡಿ. ವಿ. ಪ್ರಹ್ಲಾದ್


*Mind's whole function is to go on dividing. The function of the heart is to see the joining link about which the mind is completely blind.*

***-Osho***


ಚಂದಾ ವಿವರ

ಬಿಡಿ ಪ್ರತಿ : ರೂ ೨೦/-
ವಾರ್ಷಿಕ ಚಂದಾ : ರೂ ೮೦/-
ಎರಡು ವರ್ಷಕ್ಕೆ : ರೂ ೧೬೦/-
ಐದು ವರ್ಷಕ್ಕೆ : ರೂ ೪೦೦/-

*ಮುಖಪುಟ: ಕೈ ಸ್ಮರಣಿಕೆಯಿಂದ ಮತ್ತು ಒಳಪುಟಗಳಲ್ಲಿ*

ಚಂದ್ರಮಾಗಡಿ, ಎಂ.ಆರ್. ಭಗವತಿ, ದೇವರಾಜ್,
ಪ್ರಕಾಶ್‌ಬಾಬು, ಎಂ.ಎಸ್. ಮೂರ್ತಿ, ಎಸ್. ಎನ್. ಸ್ವಾಮಿ
ಕಾಜರಿಪಾಲ್ ಅವರ ಕೃತಿಗಳು





*ಸಂಪರ್ಕ ವಿಳಾಸ*

ನಂ. ೧೦೦, ೨ನೇ ಮುಖ್ಯರಸ್ತೆ
೬ನೇ ಬ್ಲಾಕ್, ೩ನೇ ಹಂತ, ೩ನೇ ಘಟ್ಟ
ಬನಶಂಕರಿ, ಬೆಂಗಳೂರು-೫೬೦ ೦೮೫
ಫೋನ್ : ೦೮೦-೬೭೯೧೯೨೫

# ಪ್ರತಿಕ್ರಿಯೆ

ಈಚಿನ ಸಂಚಯ ಬಂದು ಕೈತಲುಪಿದೆ, ಕೃತಜ್ಞತೆಗಳು. ಸಂಚಿಕೆ ಚೆನ್ನಾಗಿದೆ; ಸಂಚಯ ಇಷ್ಟು ವರ್ಷಗಳಿಂದ ಸತತವಾಗಿ ಪ್ರಕಟಗೊಳ್ಳುತ್ತಿರುವುದು ನಿಮ್ಮ ಸಾಹಿತ್ಯ ಪ್ರೀತಿಯ ಸಂಕೇತ.

*-ಎಂ. ಎಸ್. ಶ್ರೀರಾಮ್,* ಅಹಮದಾಬಾದ್

ಸಂಚಯದ ನೂತನ ಸಂಚಿಕೆ ಬಂದಿದೆ-ಓದುತ್ತಿದ್ದೇನೆ ಅದರಲ್ಲಿ ಬಂದ 'ದಿವ್ಯ'ದ ಮೇಲಿನ ವಿಮರ್ಶೆ ಓದಿದೆ. ಎಸ್. ಆರ್. ವಿಜಯಶಂಕರ ಅವರ ವಿಮರ್ಶೆಯನ್ನೂ ಓದಿದ್ದೆ ನಿಮ್ಮದು ಹೆಚ್ಚು ಸಮತೋಲನ ಉಳ್ಳದ್ದು ಎನಿಸಿತು.

*- ಹಾಲಾಡಿ ಮಾರುತಿರಾವ್,* ಬೆಂಗಳೂರು

ದಿವ್ಯದ ಬಗ್ಗೆ ನಿಜಕ್ಕೂ ದಿವಿನಾದ ಮಾತುಗಳಾಡಿದ್ದೀರಿ, ಈ ಸಂಚಿಕೆಯಂತೂ ವಿನ್ಯಾಸದ ದೃಷ್ಟಿಯಿಂದಲೂ ತುಂಬ ಚೆನ್ನಾಗಿ ಬಂದಿದೆ, ಅಕ್ಷರ, ಡನ್‌ಕಿನ್ ಝಳಕಿ ವಸುಧೇಂದ್ರ, ಎಸ್.ಆರ್. ವಿಜಯಶಂಕರ, ಕೆನಿತ್ ಕೆನ್‌ಸ್ಟನ್ - ವಿಚಾರದ ಗುಂಗಿನಲ್ಲಿ ಒಳಗಿನದೆಲ್ಲವನ್ನೂ ತಡಕಿದ ಸಮರ್ಥ ಬರಹಗಳು.

*- ಡಿ. ಎಸ್. ರಾಮಸ್ವಾಮಿ,* ಅರಸೀಕೆರೆ

ಹೊಸ ಸಂಚಯ ಹೂರಣ, ಓರಣ ಎರಡರಲ್ಲೂ ತಾಜಾ ಆಗಿದೆ.

*- ಜಯಂತ ಕಾಯ್ಕಿಣಿ,* ಬೆಂಗಳೂರು

ಸುಮಂಗಲಾ ಬಾದರದಿನ್ನಿಯವರ ಚಿಗುರೆಲೆಗಳ ವಿನ್ಯಾಸ, ಖುತರ ಚಿತ್ರಗಳು ಸುಂದರವಾಗಿ ಮೂಡಿವೆ. ತ್ರೈಮಾಸಿಕವಾಗಿ ಹೆಚ್ಚು ಪುಟಗಳೊಂದಿಗೆ ಆಕರ್ಷಕವಾಗಿ ಹೊರಬಂದಿರುವ ಸಂಚಯಕ್ಕೆ ಸ್ವಾಗತ, ನಿಮಗೆ ಎಲ್ಲ ಶುಭಗಳೂ ಇರಲಿ.

*-ಗೋವಿಂದ ಹೆಗಡೆ,* ಹುಬ್ಬಳ್ಳಿ

## *ಚಂದಾದಾರರಲ್ಲಿ ಒಂದು ಮಾತು*

*ಎಂ.ಓ. ಮೂಲಕ ಚಂದಾ ಕಳುಹಿಸುವವರು ಕೌಂಟರ್ ಫಾಯಿಲ್‌ನಲ್ಲಿ ತಪ್ಪದೇ ನಿಮ್ಮ ವಿಳಾಸ ಬರೆಯಿರಿ, ಹೊರ ಊರಿನ ಚೆಕ್ ಕಳುಹಿಸುವರು ರೂ10/- ಹೆಚ್ಚಿಗೆ ಕಳುಹಿಸಿ. 'ಸಂಚಯ' ಎನ್ನುವ ಹೆಸರಿಗೇ ನಿಮ್ಮ ಚೆಕ್ ಡಿ.ಡಿ. ಕಳುಹಿಸಬಹುದು.*

*ನಿಮ್ಮ ವಿಳಾಸ ಬದಲಾದಲ್ಲಿ ದಯವಿಟ್ಟು ಒಂದು ಕಾರ್ಡು ಹಾಕಿ. ನಮ್ಮ ಸಮಯ ಶ್ರಮ ಸುರಿದು ರೂಪಿಸಿದ ಪತ್ರಿಕೆಯ ಪ್ರತಿಗಳು ವ್ಯರ್ಥ ವಾಪಸ್ಸಾಗುವುದು, ಬೇಡದ ಜಾಗಗಳಲ್ಲಿ ಕೊಳೆಯುವುದು ಬೇಡ.*

*ಪುಸ್ತಕ ವಿಮರ್ಶೆ / ಪರಿಚಯಕ್ಕೆ ಸಾಧ್ಯವಾದಲ್ಲಿ ಎರಡು ಪ್ರತಿ ಕಳುಹಿಸಿ.*

*ನಿಮ್ಮ ಸ್ನೇಹಿತರನ್ನು ಗೆಳೆಯರನ್ನು ಆಸಕ್ತಿ ಇರುವವರನ್ನು ಸಂಚಯಕ್ಕೆ ಚಂದಾದಾರರನ್ನಾಗಿಸಿ 'ಸಂಚಯ ಸ್ನೇಹವಲಯ' ವಿಸ್ತರಿಸಿ.*

*ನಿಮ್ಮ ಬರಹಗಳು ಮತ್ತು ಸಂಚಯ ಕುರಿತ ಅನಿಸಿಕೆ ಅಭಿಪ್ರಾಯಗಳಿಗೆ ಸ್ವಾಗತವಿದೆ.*



# ಈ ಸಂಚಯದಲ್ಲಿ...













# ಹೊಳೆದದ್ದು ತಾರೆ
# ಉಳಿದದ್ದು ಆಕಾಶ !

*ಪ್ರಿಯ ಓದುಗರೆ,*

ಸಾಹಿತ್ಯ ಸ್ಪರ್ಧೆಗಳು ಇವತ್ತು ಯಾವತ್ತಿಗಿಂತಲೂ ವಿಪುಲವಾಗಿವೆ. ಈಚೆಗೆ ಕನ್ನಡದ ದಿನ ಪತ್ರಿಕೆಯೊಂದು ತನ್ನ ಕಥಾ ಸ್ಪರ್ಧೆಗೆ ಬಹುಮಾನವಾಗಿ ಇಪ್ಪತ್ತೈದು ಸಾವಿರ ರೂಪಾಯಿ ಪ್ರಕಟಿಸಿದೆ. ಏನೊಂದೂ ಶ್ರಮಪಡದೆ ಕರೋಡ್‌ಪತಿಗಳಾಗಬಲ್ಲ ಇವತ್ತಿನ ಪರಿಸ್ಥಿತಿಯಲ್ಲಿ ಸಾಂಸ್ಕೃತಿಕ ಕ್ಷೇತ್ರದ ಮಟ್ಟಿಗೆ ಕನ್ನಡ ಸಾಹಿತಿಗಳೇ ಬಡವರು! ಉಳಿದಂತೆ ಲಕ್ಷಗಟ್ಟಲೆ ತಮ್ಮ ಪೇಂಟಿಂಗು-ಪ್ರತಿಭೆಗಳಿಗೆ ಬೆಲೆಹೊತ್ತ ಕಲಾವಿದ-ಸಂಗೀತಗಾರರಿದ್ದಾರೆ. ಕಥಾಸ್ಪರ್ಧೆ ಎನ್ನುವುದು ದೊಡ್ಡ ಪತ್ರಿಕೆಗಳ ಮಟ್ಟಿಗೆ ಪ್ರತಿಷ್ಠೆಯ ವಿಚಾರವಾಗತೊಡಗಿದೆ. ಅದಕ್ಕೆ ಕೈ ಜೋಡಿಸುವ ವ್ಯಾಪಾರಸ್ಥರ ವ್ಯಾಪಾರೀ ಆಲೋಚನೆಗಳೂ ಕಡಿಮೆ ಏನಲ್ಲ. ಉಳಿದಂತೆ ಯಾವತ್ತಿಗೂ 'ಶಾಶ್ವತ ಉದಯೋನ್ಮುಖರ' (ನಿಂತಲ್ಲೇ ಶಾಪಗ್ರಸ್ಥರ ಹಾಗೆ ಬೆಳೆಯದೆ ಕೊಳೆಯದೆ ಬರೆಯುತ್ತಲೇ ಇರುವವರ) ಪ್ರೋತ್ಸಾಹಕ್ಕೆ ಇಂತಿಷ್ಟು ಪ್ರವೇಶಧನ ಅಂತ ಹಣ ಸುಲಿಯುವ ಸ್ಪರ್ಧೆಗಳೂ ಬೇಕಾದಷ್ಟಿವೆ. ಅಕ್ಷರವಂತರಾಗಿದ್ದು ಓದುವ ಭಾವಿಸುವ ಸೂಕ್ಷ್ಮವಿರುವ ಅನೇಕರಿಗೆ ಹೆಚ್ಚಿನ ಶ್ರಮವಿಲ್ಲದೆ ಯಾವ ತಾಂತ್ರಿಕ ಪರಿಣತಿಯ ಅಗತ್ಯವೂ ಇಲ್ಲದೆ ಬರೆಯುವುದು ಒಂದು ಆಕರ್ಷಣೆಯಾಗುತ್ತದೆ. ಬಹಳಸಲ ಅದಕ್ಕೆ ಬೇಕಾದ ತಯಾರಿ ತೀವ್ರತೆಗಳು ಸಾಲದಾಗಿರುತ್ತವೆ. ಇಂಥವರ ಆಸಕ್ತಿ ಪೋಷಣೆಗಳಿಗೆ ಸ್ಪರ್ಧೆ ಮಾಡುವವರ, ಪುಸ್ತಕ ಪ್ರಕಾಶಕರ ದೊಡ್ಡ ಜಾಲವೇ ಬೆಳೆದಿದೆ.

ಇಷ್ಟರ ಮಧ್ಯೆ ಇಂಥಾ ಯಾವ ಸೋಗಿನ ಸೋಂಕೂ ಇಲ್ಲದೆ ನಡೆಯುವ ಸ್ಪರ್ಧೆಗಳೂ ಇರುತ್ತವೆ. ಇಲ್ಲಿ ಯಾವ ದೊಡ್ಡ ಮೊತ್ತದ, ಬಣ್ಣದ ಪ್ರಚಾರದ, ಅಬ್ಬರಗಳಿರುವುದಿಲ್ಲ. ಹೊಸ ಬರಹಗಾರನ ಯಾವ ಅಹಂಕಾರವನ್ನೂ ಪ್ರಚೋದಿಸದೆ ನೀನು ಬರೆದ ಈ ಕವನ, ಕತೆ ಚೆನ್ನಾಗಿದೆ ಅಂತ ನಿಜದ ಸೂಜಿಮೊನೆಯ ನೆನಪು ಮಾಡುತ್ತಲೇ ನೀನಿನ್ನೂ ಚೆನ್ನಾಗಿ ಬರೆಯಬಹುದು ಅಂತ ಹುರಿದುಂಬಿಸುವ, ಆತ್ಮವಿಶ್ವಾಸ ಹುಟ್ಟಿಸುವ ಒಳ್ಳೆಯ ಬರಹಕ್ಕೆ ಪ್ರೇರಣೆ ತುಂಬಬಲ್ಲದ್ದು ನಿಜವಾದ ಸಾಹಿತ್ಯ ಸ್ಪರ್ಧೆಯೊಂದರ ಕೆಲಸ. ಸಂಚಯ ಸಾಹಿತ್ಯ ಸ್ಪರ್ಧೆಯ ಉದ್ದೇಶ ಅದೇ. ಅದರ ಫಲ ಈ ಸಂಚಿಕೆಯ ಬಹುಪಾಲು ಪುಟಗಳನ್ನು ಆವರಿಸಿದೆ.

ನಿಮ್ಮ

***ಸಂಪಾದಕ***

# ಕನ್ನಡ ಸಂಸ್ಕೃತಿ ಮತ್ತು ಜಾಗತೀಕರಣ ಒಂದು ಮುಖಾಮುಖಿ

■ ಹರೀಶ್‌ಕೇರ (ಸುಳ್ಯ ದ.ಕ.)

ಜಾಗತೀಕರಣವೆಂಬುದೊಂದು ದಿಢೀರ್ ಪ್ರಕ್ರಿಯೆಯೆಂದು ತಿಳಿಯುವಂತಿಲ್ಲ. ಹಾಗೆ ತಿಳಿದ ಕೂಡಲೆ ಅದರ ಅಸ್ತಿತ್ವ, ಉಗಮ ಮತ್ತು ಸ್ವರೂಪಗಳ ಕುರಿತು ಏಳುವ ಪ್ರಶ್ನೆಗಳಿಗೆ ಖಚಿತ ಉತ್ತರಗಳನ್ನು ಹುಡುಕಬೇಕಾಗುತ್ತದೆ. ಆದರೆ ಜಾಗತೀಕರಣವೆಂಬುದು ಒಂದು ನಿರಂತರ ಮತ್ತು ಮಧ್ಯಯುಗದ ನಂತರ ವೇಗವನ್ನು ಪಡೆಕೊಳ್ಳತೊಡಗಿದ ಪ್ರಕ್ರಿಯೆಯೆಂದು ಅರಿಯುವುದು ನಾವು ಅದರ ಕುರಿತು ವಿಮರ್ಶಿಸುವಲ್ಲಿ ಇಡುವ ಮೊದಲನೇ ಸರಿಯಾದ ಹೆಜ್ಜೆ.

ಜಾಗತೀಕರಣದ ಫಲವಾಗಿ ಎಲ್ಲದೇಶಗಳು, ಎಲ್ಲ ಜನಾಂಗಗಳು, ಎಲ್ಲ ಜೀವನ ವಿಧಾನಗಳು ಜಾಗತಿಕ ಕಣ್ಣಿನಿಂದ ಕಾಣಲ್ಪಟ್ಟವು. ಆದ್ದರಿಂದಲೇ, ಕನ್ನಡ ಸಂಸ್ಕೃತಿಯ ಮೇಲೆ ಜಾಗತೀಕರಣದ ಪರಿಣಾಮ ಏನಾಗಿದೆ ಎಂದು ನಾವು ಚರ್ಚಿಸುವಾಗ, ಅದು ತಮಿಳು ಸಂಸ್ಕೃತಿಯ ಮೇಲೆ ಅಥವಾ ತೆಲುಗು ಸಂಸ್ಕೃತಿಯ ಮೇಲೆ ಅಥವಾ ದಕ್ಷಿಣ ಆಫ್ರಿಕಾದ ಇಬೋ ಸಂಸ್ಕೃತಿಯ ಮೇಲೆ ಜಾಗತೀಕರಣದ ಪರಿಣಾಮ ಏನಾಗಿದೆ ಎಂದು ಚರ್ಚಿಸುವುದೂ ಆಗಬಹುದು. ಇವಕ್ಕೆ ಹೆಚ್ಚಿನ ವ್ಯತ್ಯಾಸಗಳು ಇರಲಾರವು. ಭಾಷೆ, ಬಳಕೆಗಳಲ್ಲಿ ವ್ಯತ್ಯಾಸವಿರಬಹುದು, ಆದರೆ ಬದಲಾವಣೆಯ ಸ್ವರೂಪಗಳಲ್ಲಿ ಅಲ್ಲ. ಏಕೆಂದರೆ, ಇಂದು ಜಾಗತೀಕರಣಕ್ಕೆ ಮುಖಾಮುಖಿಯಾಗದ ಸಂಸ್ಕೃತಿಗಳೇ ಇಲ್ಲ.

ವಾಸ್ಕೋಡಗಾಮ ಮುಂತಾದವರು ಕರಾವಳಿ, ಕರ್ನಾಟಕಗಳನ್ನು ಪ್ರವೇಶಿಸಿ ಇಲ್ಲಿ ಆಡಳಿತವನ್ನು ಆಕ್ರಮಿಸಿಕೊಳ್ಳತೊಡಗಿದ್ದು; ಅಫ್ಘಾನಿಸ್ತಾನ, ಅರಬ್ ದೇಶಗಳಿಂದ ಮುಸಲ್ಮಾನ ದೊರೆಗಳು ದಂಡೆತ್ತಿ ಬಂದು ಅಧಿಕಾರ ಹೊಂದಿದ್ದು; ಕರ್ನಾಟಕ ಆದಿಲಶಾಹಿಗೆ ಒಳಗಾದದ್ದು; ಆಮೇಲೆ ಇಂಗ್ಲಿಷರ ವ್ಯಾಪಾರ, ರಾಜಕೀಯ ನೀತಿಗಳಿಗೆ ಒಳಗಾದದ್ದು- ಇವೆಲ್ಲ ಜಾಗತೀಕರಣದ ಆದಿಮ ರೂಪಗಳೇ ಆಗಿವೆ. ಜಾಗತೀಕರಣದ ಸೂಕ್ಷ್ಮ ಬೇರುಗಳು ಎಲ್ಲ ಸಂಸ್ಕೃತಿಗಳಲ್ಲೂ ವಸಾಹತುಶಾಹಿ ಮತ್ತು ಕೈಗಾರಿಕಾ ಸಂಸ್ಕೃತಿಯಿಂದಲೇ ಮೊಳಕೆಯೊಡೆಯ ತೊಡಗಿದ್ದವು. ಕನ್ನಡವೂ ಇದಕ್ಕೆ ಹೊರತಲ್ಲ.



ಬಹುಶಃ ಇಲ್ಲಿ 'ಗಂಡಭೇರುಂಡ' ಎಂಬ ಹೆಸರಿನ ಕಾಲ್ಪನಿಕ ಪೌರಾಣಿಕ ಪಕ್ಷಿಯನ್ನು ನೆನಪಿಸುವುದು ಅನುಚಿತವಾಗಲಾರದು. ಇದಕ್ಕೆ ಎರಡು ತಲೆ;

ಹಾಗೆಯೇ ಜಾಗತೀಕರಣಕ್ಕೂ ಕೂಡ ಎರಡು ಮುಖಗಳು. ಜಾಗತೀಕರಣವೆಂಬುದು ನಮಗೊದಗಿದ ಶಾಪವೆಂದು ತಿಳಿಯುವುದು, ಅಥವಾ ಜಾಗತೀಕರಣವೇ ನಮ್ಮನ್ನುದ್ಧರಿಸಬಲ್ಲ ಏಕೈಕ ಮಾರ್ಗವೆಂದು ತಿಳಿಯುವುದು-ಎರಡೂ ಅತಿರೇಕಗಳು ಇಲ್ಲೊಂದು ಸಂತುಲಿತ ದೃಷ್ಟಿಕೋನ ಅಗತ್ಯ. ಜಾಗತೀಕರಣ ನಮಗೆ ಸೌಲಭ್ಯಗಳನ್ನೂ ಸುಖಗಳನ್ನೂ ಹೇಗೋ ಹಾಗೆ ಸಂಕಟಗಳನ್ನೂ ಸಮಸ್ಯೆಗಳನ್ನು ಜೊತೆಯಾಗಿಯೇ ತಂದೊಡ್ಡಿದೆ.

ಜಾಗತೀಕರಣದ ಸುಳಿಯೊಳಗೇ ನಮಗೆ ಕಾಣುವ ಇನ್ನಿತರ ಅಂಶಗಳೆಂದರೆ ಕಂಪ್ಯೂಟರೀಕರಣ, ಮುಕ್ತ ಅರ್ಥಿಕ ನೀತಿ, ಮತ್ತು ಮಾಧ್ಯಮ ಕ್ರಾಂತಿ. ಕಂಪ್ಯೂಟರ್ ಜಾಲಗಳಿಂದ, ಮಾಹಿತಿ ತಂತ್ರಜ್ಞಾನ ವ್ಯವಸ್ಥೆಯಿಂದ ಜಗತ್ತು 'ವಿಶ್ವಗ್ರಾಮ'ವಾಗಿ ಮಾರ್ಪಟ್ಟಿದ್ದು ನಿಜ. ನಮ್ಮ ಉತ್ಪನ್ನಗಳ ಬಗ್ಗೆ ಹೊರದೇಶದಲ್ಲಿ ಅರಿವು ಮೂಡಿಸಬಹುದು, ಮಾರುಕಟ್ಟೆ ಪಡೆಯಬಹುದು. ಕನ್ನಡದ ಅನೇಕ ಪ್ರತಿಭಾವಂತರಿಗೆ ಮಾಹಿತಿ ಜ್ಞಾನ ಕ್ಷೇತ್ರದಲ್ಲಿ ಮನ್ನಣೆಯ ಮಣೆ. ಅಮೆರಿಕಾ ವಾಸ ಲಭ್ಯವಾಗತೊಡಗಿ ಅನೇಕ ವರ್ಷಗಳೇ ಉರುಳಿವೆ. ಜಗತ್ತಿನ ಯಾವುದೇ ಮಾಹಿತಿ ಎಲ್ಲಿ ಬೇಕೆಂದರಲ್ಲಿ ಈಗ ಲಭ್ಯ. ಕನ್ನಡಕ್ಕೆ ವಿಶಿಷ್ಟವಾಗಿರುವ ಭಾಷೆಯ ಸಾಹಿತ್ಯ ಶ್ರೀಮಂತಿಕೆ, ಭಾಷೆಯ ಬನಿ, ಜನಪದ ಸೊಗಡು ಇವೆಲ್ಲ ಹೊರಗಿನವರಿಗೆ ತಿಳಿಯತೊಡಗಿವೆ. ಅನೇಕರು ಹೊರಗಿನಿಂದ ಬಂದು ಸಂಶೋಧನೆ, ಅಧ್ಯಯನಗಳನ್ನೂ ನಡೆಸಿದ್ದಾರೆ. ನಮ್ಮ ಸಂಸ್ಕೃತಿಯನ್ನು ನಾವೇ ಅಚ್ಚರಿಯಿಂದ ಸಮೀಕ್ಷಿಸಿಕೊಳ್ಳುವುದು ಸಾಧ್ಯವಾಗಿದೆ.

ಇದರ ಜೊತೆಗೆ ಜಾಗತೀಕರಣ ಅನೇಕ ಮುಂದುವರೆದ ದೇಶಗಳ ಕೈಗಾರಿಕಾ ಅಭಿವೃದ್ಧಿಯ ಉತ್ಪನ್ನಗಳಿಗೆ ನೂತನ ವಾಹಕವಾಗಿದೆ. ಕನ್ನಡ ಸಂಸ್ಕೃತಿಗೆ ಅಪರಿಚಿತವಾದ, ಆದರೆ ನಮ್ಮ ಸಂಸ್ಕೃತಿಯೊಳಗೆ ಅಳವಡಿಸಿಕೊಳ್ಳಬಲ್ಲ ಅನೇಕ ಹೊಸ ಆಚರಣೆಗಳು, ಸಾಧನಗಳು ಆಗಮಿಸಿವೆ. ಇಲ್ಲಿಗೆ ಹೋಲಿಸಿದರೆ ಕಡಿಮೆ ದರದಲ್ಲಿ ಅನೇಕ ಹೊರಗಿನ ಉತ್ಪನ್ನಗಳು ಉತ್ತಮ ಗುಣಮಟ್ಟದಲ್ಲಿ ದೊರಕುತ್ತಿವೆ.

ಇವೆಲ್ಲ ಮೇಲ್ನೋಟಕ್ಕೆ ತೋರುವ ಜಾಗತೀಕರಣದ ಒಂದು ಮುಖ. ಇದೊಂದು ಸುಖದ ಚಿತ್ರಣ. ಆದರೆ, ಊರಿಗಿಂತ ಕೊಳೆಗೇರಿಯೇ ದೊಡ್ಡದಾದರೆ? ಜಾಗತೀಕರಣದ ಇನ್ನೊಂದು ಮುಖವಾದರೋ ಕರಾಳವಾದದ್ದು. ಅದು ನೋವಿನಿಂದ ಕೂಡಿದ್ದು. ಅದು ನಮ್ಮ ಸಂಸ್ಕೃತಿಗೆ ಅಂಟಿಕೊಂಡ ಬಂದಣಿಕೆಯ ತರಹದ್ದು.

ಕರ್ನಾಟಕದ ಅಡಿಕೆ ತೆಂಗು ಮುಂತಾದ ವಾಣಿಜ್ಯ ಬೆಳೆಗಳು, ಕೆಲವು ಆಹಾರ ಬೆಳೆಗಳು ತಮ್ಮ ರೈತರಿಗೆ ಲಾಭವನ್ನೂ ಹಸನಾದ ಬದುಕನ್ನೂ ಇದುವರೆಗೆ ನೀಡುತ್ತಿದ್ದವು. ಆದರೆ ವಿದೇಶದಿಂದ ಇವೇ ಬೆಳೆಗಳು ಈಗ ಆಮದಾಗ ತೊಡಗಿವೆ. ಇದು ಆಡಳಿತಾತ್ಮಕ ಒಪ್ಪಂದಗಳ ಹಿನ್ನೆಲೆಯಲ್ಲಿ ನಡೆದಿವೆ. ಈ ಒಪ್ಪಂದಗಳ ಹಿಂದೆ ಮುಕ್ತ ಮಾರುಕಟ್ಟೆ ನೀತಿಯೂ ಅದನ್ನು ಆಡಿಸುತ್ತ ಜಾಗತೀಕರಣವೂ ಇದೆ. ಇದರಿಂದಾಗಿ ನಮ್ಮ ಬೆಳೆಗಳಿಗೆ ಬೆಲೆ ಎಂದೂ ಇಲ್ಲದಷ್ಟು ಕುಸಿದಿದ್ದು, ರೈತ ಜೀವನ ಸಾಗಿಸಲು ಪರದಾಡಬೇಕಾದ ಪರಿಸ್ಥಿತಿ ಬಂದಿದೆ. ಅನೇಕ ಕಡೆ ರೈತರ ಆತ್ಮಹತ್ಯೆಗಳೂ ನಡೆದಿವೆ.

ಹೊರಗಿನಿಂದ ಬಂದ ತೆಂಗಿನೆಣ್ಣೆಯ ಕಂಪೆನಿಗಳೊಡನೆ ಸ್ಪರ್ಧಿಸಲಾಗದೆ ಕರ್ನಾಟಕ ಕರಾವಳಿಯ ಸ್ಥಳೀಯ ಎಣ್ಣೆಮಿಲ್ಲುಗಳನೇಕ ನೆಲಕಚ್ಚುವ ಹಂತದಲ್ಲಿದೆ. ಅವುಗಳು ಸರಕಾರದ ಜೊತೆಗೆ ಮಾಡಿಕೊಂಡ

ಒಪ್ಪಂದ ಮತ್ತು ನಿಬಂಧನೆಗಳ ಪ್ರಕಾರ ತೆಂಗಿನೆಣ್ಣೆಯನ್ನು ಸ್ಯಾಶೆಗಳಲ್ಲಿ ಅಥವಾ ಸೀಲು ಮಾಡಿದ ಬಾಟ್ಲಿಗಳಲ್ಲಿ ಮಾತ್ರ ಮಾರಬೇಕು. ಇದು ಸಾಧ್ಯವಾಗಬೇಕಾದರೆ ನಮ್ಮ ಎಣ್ಣೆ ಮಿಲ್ಲುಗಳು ಕೋಟ್ಯಂತರ ರೂಪಾಯಿಗಳನ್ನು ಯಂತ್ರೋಪಕರಣಗಳಿಗಾಗಿ ತೊಡಗಿಸಬೇಕು. ಅಲ್ಲಿಗೆ ನಮ್ಮ ಮಿಲ್ಲುಗಳ ಕಥೆ ಮುಗಿದಂತೆ.

'ನೀರಾ' ಇನ್ನೊಂದು ಉದಾಹರಣೆ. ವಿದೇಶೀ ಮದ್ಯದ ಕಂಪೆನಿಗಳ ಲಾಬಿ ನಮ್ಮ ನೆಲಕ್ಕೆ ಆಪ್ತವಾದ ಒಂದು ಜೀವನ ವಿಧಾನವನ್ನು ಹೇಗೆ ನೆಲಸಮ ಮಾಡಬಲ್ಲದು ಎಂಬುದಕ್ಕೆ ಇದ್ದಕಿಂತ ಬೇರೆ ಉದಾಹರಣೆ ಬೇಕಿಲ್ಲ.

ಕರ್ನಾಟಕದ್ದೇ ಆದ ಅನೇಕ ಉತ್ಪನ್ನಗಳಿಗೆ ಪೇಟೆಂಟ್ ಪಿಶಾಚಿ ಬಾಧಿಸತೊಡಗಿದೆ. ಅಮೆರಿಕನ್ ಮೂಲದ ಮಹಾತ್ವಾಕಾಂಕ್ಷೀ ಕಂಪೆನಿಗಳು ನಮ್ಮ ಅನೇಕ ಬೆಳೆಗಳ, ಉತ್ಪನ್ನಗಳ ಮೇಲೆ ಸಾರಾಸಗಟಾಗಿ ಪೇಟೆಂಟ್ ಪಡೆಯ ತೊಡಗಿವೆ. ಮುಕ್ತ ಮಾರುಕಟ್ಟೆ ನೀತಿಗೆ ಒಳಗಾಗಿರುವ ಭಾರತ ಇದನ್ನು ಪೂರ್ತಿಯಾಗಿ ಖಂಡಿಸುವಂತೆಯೂ ಇಲ್ಲ. ನುಂಗಲಾರದ ಉಗುಳಲಾರದ ಬಿಸಿ ತುಪ್ಪ. ನಮ್ಮ ನೆಲದ ನಿಧಾನ ನಿರ್ಬೀಜಕಾರಕತೆಗೆ ಜಾಗತೀಕರಣ ಮುನ್ನುಡಿ ಬರೆಯತೊಡಗಿದೆ.

ನಮ್ಮ ರೈತ ಆರ್ಥಿಕವಾಗಿ ಸಂಪನ್ನನಾಗಿದ್ದಾಗ ತನ್ನ ಸುತ್ತಮುತ್ತಲಿನ ಸಾಂಸ್ಕೃತಿಕ ಚಟುವಟಿಕೆ ಮತ್ತು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಧಾರಾಳವಾಗಿ ಹಣ ತೊಡಗಿಸಿ ಅವುಗಳಲ್ಲಿ ಪಾಲ್ಗೊಳ್ಳುತ್ತಾನೆ. ಆತನ ಜೇಬು ಖಾಲಿಯಾಗಿದ್ದರೆ ಅವುಗಳೆಲ್ಲ ನಿಂತು ಹೋಗುತ್ತದೆ. ನಮ್ಮ ಆರ್ಥಿಕ ಮತ್ತು ಸಾಂಸ್ಕೃತಿಕ ರಂಗದ ಎಲ್ಲ ವ್ಯವಹಾರಗಳೂ ಕೃಷಿಕ ಗ್ರಾಹಕರನ್ನೇ ಅವಲಂಬಿಸಿದೆಯಾದುದರಿಂದ ಆತ ವಿಷಣ್ಣನಾದರೆ ಒಟ್ಟು ಸಮಾಜವೇ ಮಂಕು ಕವಿದು ಕೂರುತ್ತದೆ.

ನಿಗದಿತ ಸಂಬಳ ಪಡೆಯುವ ಸರಕಾರೀ ಮತ್ತಿತರ ನೌಕರರು ಜಾಗತೀಕರಣದ ಫಲವಾದ ತೃತೀಯ ಜಗತ್ತಿನ ಮಾರುಕಟ್ಟೆಯ ಪ್ರಮುಖ ಗ್ರಾಹಕರು. ಅವರು ತಮ್ಮ ಮಿತಿಯನ್ನು ಮೀರಿ ಖರ್ಚನ್ನು ಮಾಡಲಾರರು. ಹಳ್ಳಿಯ ಸಾಂಸ್ಕೃತಿ ವಾತಾವರಣಕ್ಕೆ ಅವರೆಲ್ಲ ಪರಕೀಯರಾದುದರಿಂದ ಅವರಿಂದ ಕನ್ನಡ ಸಂಸ್ಕೃತಿಯ ಉಳಿಸುವಿಕೆಯಾಗಲೀ ಬೆಳೆಸುವಿಕೆಯಾಗಲೀ ಕಷ್ಟಸಾಧ್ಯ.

ಜಾಗತೀಕರಣದ ನೇರ ಪ್ರಭಾವಕ್ಕೆ ಸಿಲುಕಿರುವ ನಮ್ಮ ಸಂಸ್ಕೃತಿಯ ಮತ್ತೊಂದು ಅಂಗವೆಂದರೆ ಭಾಷೆ. ಅಂತರಾಷ್ಟ್ರೀಯ ಖ್ಯಾತಿಯ ಭಾಷಾವಿಜ್ಞಾನಿ ಪ್ರೊ|| ಬ್ರಜ್. ಬಿ. ಕಚ್ರೂ (ಇಲಿನ್ಯಾಸ್ ವಿ.ವಿ. ನಿರ್ದೇಶಕ) ಒಂದು ದಿಗಿಲು ಹುಟ್ಟಿಸುವ ಅಂಶವನ್ನು ಹೊರಗೆಡಹಿದ್ದಾರೆ. ಜಾಗತೀಕರಣದ ಪ್ರಮುಖ ಸಾಧನವಾದ ಇಂಗ್ಲಿಷ್ ಭಾಷೆ ಉಳಿದ ಭಾಷೆಗಳನ್ನು ನೆಲ ಸಮಗೊಳಿಸುತ್ತಿದೆ. ಅವುಗಳಲ್ಲಿ ಕನ್ನಡವೂ ಒಂದು.

ಈಗಾಗಲೇ ಅನೇಕ ಆದಿವಾಸೀ ಭಾಷೆಗಳು ನಿರ್ನಾಮಗೊಂಡಿವೆ. ಒಂದು ಅರ್ಥದಲ್ಲಿ ಬಹು ಸಾಂಸ್ಕೃತಿಕವಾದ ಇಂಗ್ಲಿಷ್ ಭಾಷೆಯನ್ನು ಜಾಗತೀಕರಣದ ಸಾಧನಗಳು ಮತ್ತಷ್ಟು ಆಕರ್ಷಕ ಸಂವಹನ ಭಾಷೆಯನ್ನಾಗಿದೆ. ನಮ್ಮಲ್ಲಿನ ಮೇಲ್ವರ್ಗದವರು ಇಂಗ್ಲಿಷನ್ನು ಪ್ರತಿಷ್ಠೆಯ ವಿಷಯವಾಗಿ ತೆಗೆದುಕೊಳ್ಳುತ್ತಾರೆ. ಇದರಿಂದಾಗಿ ಕನ್ನಡ ಭಾಷೆ ನಿಧಾನವಾಗಿ ಕ್ಷೀಣಿಸುತ್ತ ಬರುತ್ತಿದೆ. ಮುಂದೊಂದು ದಿನ ಕನ್ನಡ ಶಬ್ದಗಳೇ ಅಪರೂಪವಾಗಿ ಬಿಡುವ ಕಾಲವೂ ಬಂದೀತು.

ನಮ್ಮ ಮಕ್ಕಳನ್ನು ನಾವು ಹೇಗೆ ತರಬೇತುಗೊಳಿಸುತ್ತಿದ್ದೇವೆಂಬುದನ್ನು ಇಲ್ಲಿ ನೆನೆಯಬೇಕು. ಕಾನ್ವೆಂಟು ಬಿಟ್ಟರೆ ಬಂದು ಪಡಸಾಲೆಯ ಭೂತದ ಮುಂದೆ ಪೀಠಸ್ಥರಾಗುವ ಮಕ್ಕಳು ನೋಡುವುದಕ್ಕೆ ಹಾತೊರೆಯುವುದೇ ವಿದೇಶಿ ಚಾನೆಲ್‌ಗಳನ್ನು, ಅಲ್ಲಿ ಬರಬಹುದಾದ ಮೌಲಿಕ ಕಾರ್ಯಕ್ರಮಗಳನ್ನು ಬಿಟ್ಟು, ಉಳಿದೆಲ್ಲವನ್ನೂ ತಾಯಿತಂದೆಗಳ ಜೊತೆಗೆ ಕುಳಿತು ಅವರೂ ನೋಡುತ್ತಾರೆ. ಇಂಥ ಮಕ್ಕಳಿಗಾಗಲೀ ತಾಯ್ತಂದೆಯರಿಗಾಗಲೀ ಮೈಖೆಲ್ ಜಾಕ್ಸನ್ ಎಂದರೆ ಯಾರೆಂದು, ಎಂ ಟಿ ವಿ ವೀಜೆ ಯಾರೆಂದು ಕೇಳಿದರೆ ನಾಲಿಗೆಯ ತುದಿಯಲ್ಲಿ ಇರುತ್ತದೆ ಹೊರತಾಗಿ ನಮ್ಮದೇ ಸಂಸ್ಕೃತಿಯ ಬಹುಮುಖೀ, ಸೂಕ್ಷ್ಮ ಅಂಶಗಳಲ್ಲ. ಇಂಥವರಿಗೆ ನಮ್ಮ ಕರಾವಳಿಯ ಭೂತದ ಕೋಲವಾಗಲೀ, ಯಕ್ಷಗಾನವಾಗಲೀ, ಬಯಲುಸೀಮೆಯ ಡೊಳ್ಳು ಇತ್ಯಾದಿ ಕುಣಿತಗಳಾಗಲೀ ಕರಗವಾಗಲೀ ಹೇಗೆ ತಿಳಿದಿರಬೇಕು? ಒಂದು ಜಾತ್ರೆಯ ಪ್ರತಿ ಅಂಗಗಳನ್ನು ಕುತೂಹಲದಿಂದ ಅನುಭವಿಸುತ್ತ ಭಾಗವಹಿಸುವ ಆನಂದದಿಂದ ಅವರು ತಾವಾಗಿ ವಂಚಿತರಾದರೆ, ಅವರಿಂದ ಮುಂದಿನ ಜನಾಂಗಕ್ಕೆ ಇಂಥದ್ದೆಲ್ಲ ಸಾಂಸ್ಕೃತಿಕ ವಿವರಗಳು ತಿಳಿಯಬೇಕು ಹೇಗೆ?

ಸಾಹಿತ್ಯ ಒಂದು ಭಾಷೆಯ, ಸಂಸ್ಕತಿಯ ಒಂದು ಉನ್ನತ ಅಂಗ. ಒಂದು ಜನಾಂಗದ ಸಾಹಿತ್ಯ ತನ್ನ ಮುಂದಿನ ತಲೆಮಾರನ್ನು ನಿರ್ದೇಶಿಸುತ್ತದೆ. ನಾವು ಇಲ್ಲಿಯೂ ಎಡವಿರುವುದು ಕಾಣುತ್ತದೆ.

ಇಂಟರ್‌ನೆಟ್‌ನ ಮುಂದೆ ಕುಳಿತ ನಾವೆಲ್ಲ ಪುಸ್ತಕಗಳನ್ನು ಮರೆತೇ ಬಿಟ್ಟಿದೇವೆ. ಇ-ಮೈಲ್ ಇರುವುದರಿಂದಾಗಿ ಈಗ ಪತ್ರ ಬರೆಯುವ ಅಗತ್ಯ ಇಲ್ಲ. ಆದರೆ ನಿರ್ಭಾವುಕ ಕಂಪ್ಯೂಟರ್‌ನಲ್ಲಿ ಹಸ್ತಾಕ್ಷರ ತಲುಪಿಸುವ ಆಪ್ತ ಕ್ಷಣಗಳು ದೊರೆಯಲಾರವು. ನಿಜವಾದ, ಗಂಭೀರ ಸಾಹಿತ್ಯ ರಚನೆ ಓದುಗರಿಂದಾಗಿ ಕ್ಷೀಣಿಸಿದರೆ, ಒಂದು ಪರಂಪರೆಯನ್ನು ನಾವು ನಾವಾಗಿ ಕೊಂದುಕೊಂಡಂತೆ.

ಇದೆಲ್ಲವೂ ತಾನಾಗಿ ಸರಿ ಹೋಗಬಹುದೆಂದು ನಾವು ನಿರೀಕ್ಷಿಸುವಂತಿಲ್ಲ. ಯಾಕೆಂದರೆ ನಾವು ನಮ್ಮ ಜುಟ್ಟನ್ನು ಈಗಾಗಲೇ ಕಟುಕನ ಕೈಗೆ ಒಪ್ಪಿಸಿಕೊಟ್ಟಿದ್ದೇವೆ. ಹರಕೆಯ ಕುರಿಯನ್ನು ಹಬ್ಬಕ್ಕೆ ತಂದಾಗಿದೆ. ನಾವು ನಮಗೇ ಅರಿವಿಲ್ಲದೆ ತೋರಣದ ತಳಿರನ್ನು ಮೇಯುತ್ತಿದ್ದೇವೆ.

ಜಾಗತೀಕರಣದ ಎಲ್ಲಾ ನೋವು, ಸಂಕಷ್ಟ, ಸಂಸ್ಕೃತಿನಾಶಗಳ ಜೊತೆಗೆ ಹೋಲಿಸಿದರೆ ಅದು ಒದಗಿಸುವ ಸುಖ ಕೇವಲ ಮರೀಚಿಕೆ ಮಾತ್ರ. ಸಂಘಟಿತ ಪ್ರಯತ್ನ ನಡೆಯದೆ ಇದ್ದರೆ ಜಾಗತೀಕರಣದ ಬುಲ್ ಡೋಜರ್ ಕನ್ನಡ ಸಂಸ್ಕೃತಿಯನ್ನು ನೆಲಕ್ಕೆ ಹಾಕಿ ಸಮತಟ್ಟು ಮಾಡುತ್ತದೆ.



# ಹಕ್ಕಿ

■ ಜಿ.ಪಿ. ಕುಸುಮ (ಮುಂಬಯಿ)

ಗಾಳಿ ಬಂದಾಗಲೆಲ್ಲಾ
ಕೋಣೆಯೊಳಗೇ ಹಾರಿ, ಚಡಪಡಿಸಿ
ಕಿಟಕಿಗೇರಿ ಕುಳಿತು
ಹಾಡಲೆತ್ನಿಸುವ ಪುಟ್ಟ ಹಕ್ಕಿಯೊಳಗೊಂದು
ಹಾರುವ ಹಂಬಲ
ಎದೆಯಿಂದ ಜಾರಿ......

ಮಹಾಮನೆಯೊಳಗೆ
ಬಯಲಾಗಿರುವ
ಮೂಕ ಹಕ್ಕಿ
ತೂಗು ಹಾಕಿದ ಹಿರಿಯರ
ಫೋಟೋದ ನೆತ್ತಿಗೆ
ಕಾಲು ಸಿಕ್ಕಿಸಿ ನಿಲ್ಲಿಸಿದೆ ದೇಹ......

ಗೋಡೆಗೊರಗಿ ಹಕ್ಕಿ ಒಮ್ಮೆಮ್ಮೊ ತಲೆಯ
ಕೊಡವಿಕೊಳ್ಳುವುದ ಕಂಡರೆ
ಕುಂದುಂಟು ಗೋಡೆಗೆಂದು
ಮೌನಕುಡಿದು
ಎದ್ದು ಹೋಗುವುದದೋ
ಇಟ್ಟಿಗೆಗಳ ಸಾಲು ಸಾಲು....

ಅಂಗಳದಲ್ಲಿ ಹಿರಿಯರ ಹಳೆಯ ರಂಗೋಲಿ
ಹಲವು ಮಳೆಯ ಕಂಡರೂ
ಬಣ್ಣ ಬದಲಿಸಿಕೊಂಡಿಲ್ಲ
ಹಕ್ಕಿ ಅಂಗಳ ದಾಟಿ
ಹೊಸ ಮಣ್ಣು ನೋಡಿ
ಹೊಸದಕೆ ಹೆಜ್ಜೆ ಇಡುತಿದೆ......

ನಿನ್ನ ಪ್ರೀತಿಸಿದ್ದೇನೆಯೇ......
ಹಾರಬಿಡುವೆನೆ....!
ಬಂಧಿಸಿಡುವೆನೆ...! ಖಾತರಿಯಲ್ಲ
ಚೈತನ್ಯದ ಚಿಗುರು
ಎಲ್ಲ ನೋವುಗಳ ಮೆಟ್ಟಿ
ಅಟ್ಟಿ,
ಹಾರಿಹೋಗು....
ಜಗ ನಿನ್ನದು.



# ಬುದ್ಧ ಬಂದ

*ಹರೀಶ್‌ಕೇರ (ಸುಳ್ಯ ದ.ಕ.)*

ಬುದ್ಧ ಬಂದಿದ್ದಾನೆ ಬುದ್ಧ ಬಂದಿದ್ದಾನೆ
ಬುದ್ಧ ಬಂದಿದ್ದಾನೆ ಎಂದು
ಸಾರಿದವು ಹಕ್ಕಿಗಳು ; ವೇಣುವನದಲಿ ಸುಳಿದ
ತಂಗಾಳಿ ಸುದ್ದಿಯನು ಹೊತ್ತು ಬಂತು
ಶ್ರಾವಸ್ತಿಯಲಿ ತುಳುಕಿದುಲ್ಲಾಸ ಕಡಲಿಗೆ
ಅಂದೆ ವೈಶಾಖ ಹುಣ್ಣಿಮೆಯ ದಿವಸ
ಕೊಂಬು ಕಲಶಗಳೊಡನೆ ಮೆರವಣಿಗೆ ಸಾಗಿತು
ಬೋಧಿ ಸತ್ವನ ಕಾಂಬ ತವಕ

* * *

ಶುದ್ಧೋದನನ ಜೊತೆಗೆ ರಾಹುಲನೂ ಕೂಡ
ಪುಟ್ಟ ಹೆಜ್ಜೆಗಳನ್ನು ಇಟ್ಟು ಬಂದ
ಏಳೆ ವರುಷದ ಕಂದ; ಮುನಿ ಮೊಗದ ಚಂದ
ಕಂಡು ಬೆರಗಿನಲಿ ನಿಂದ.
ಕರೆದನೆಕ್ಕಟಿಗವನ ಎಲ್ಲ ಬಿಟ್ಟವರೊಡೆಯ
ಎಲ್ಲ ಬಿಡುವ ಉಲ್ಲಸದ ದೀಕ್ಷೆಗೈದ
ಬೋಧೆಯಲಿ ಮನ ಮುಳುಗಿ ದೀಕ್ಷೆಯನು ಕೈಗೊಂಡು
ಬುದ್ಧನೊಡನೆಯೆ ಹೊರಟು ಭಿಕ್ಷೆಗೈದ

* * *

ಈಗ ಬಂದಾನೆಂದು ಕಾದು ಕುಳಿತಿದ್ದಳು
ಅಂತಃ ಪುರದಿ ಶಾಕ್ಯ ಕುಲವಧು
ಗಂಡ ಬರಲೇ ಇಲ್ಲ; ರಾಹುಲನೂ ಕಾಣನು
ತಲ್ಲಣಿಸಿ ಉಪ್ಪರಿಗೆಯಲ್ಲಿ ನಿಂತು-
ನೋಡುತಿರೆ ಬೀದಿಯಲಿ ಭವತಿ ಭಿಕ್ಷಾಂದೇಹಿ
ಬುದ್ಧ ಶರಣೆಂದೆಂಬ ಘೋಷದೊಡನೆ
ಬುದ್ಧ ಬೋಧೆಯ ಬೆಳ್ಗೊಡೆಯ ಅಡಿಯಲ್ಲಿ
ಶಾಕ್ಯ ರಾಜಕುಮಾರ ಬರಲು ಕಂಡು-
ಕಾಲನಭಿಯೋಗದಲಿ ಕುಸಿದ ಭೂಮಿಯ ಹಾಗೆ
ಕೆಡೆದು ಬಿದ್ದಳು ತಾಯಿ; ಮಡದಿ; ಮಗಳು.
ಶ್ರಾವಸ್ತಿಯಾಗಸದ ಹುಣ್ಣಿಮೆಯ ಚಂದ್ರನಿಗೆ
ಅಂದು ಅರಳಲೆ ಇಲ್ಲ ಪ್ರಭೆಯ ಮುಗುಳು



# ಅಕ್ಷಯ ವಸ್ತ್ರ ಪ್ರಸಂಗ

ರವಿಕುಮಾರ್ (ಬೆಂಗಳೂರು)

ಒಂದೆ ಕೆಂಗುಲಾಬಿಯ ಕೆದರು ಮುಡಿಗಿಟ್ಟ
ದ್ರೌಪದಿ ಜೂಜು ಮಂದಿರದಲ್ಲಿ ಹರಾಜಾಗಿದ್ದಾಳೆ!
ಪ್ರತಿಗಾಮಿ ಕೂಗಿದ ಒಂದು ಎರಡು ಮೂರು
ದುಶ್ಯಾಸನ ಸೀರೆ ಸೆಳೆಯೋಕೆ ತಯ್ಯಾರು.

ಮಹಾಶೂರರಿಗೆ ಮೂಡಿಲ್ಲ, ಭಂಡಾರವೂ ಖಾಲಿ
ಹಿಂಡಿ ಕೊಳ್ಳುತ್ತಾರೆ ಬರಿಗೈಯನ್ನು
ವೇದಿಕೆಯಲ್ಲಿ ತೋಳಿಲ್ಲದ ರವಿಕೆಯ ದ್ರೌಪದಿ
ಅವಳ ಮುತ್ತಿನ ಹಾರ ಹರಿದರೇನೆ ಚೆನ್ನು!



ಅಂತಃಪುರದ ಏಕ ವಸ್ತ್ರಧಾರಿಣಿಯಂತೆ; ರಜಸ್ವಲೆಯಂತೆ
ಕಿವಿಗೊಡಲೇ ಇಲ್ಲ ಎಂಥಾ ಕರೆಗೂ
ಖಿದ್ದು ಮೈದುನನೇ ಎಳೆತರುವವರೆಗೂ
ಧಿಮಾಕಿನವಳಿಗೆ ಹೀಗೆ ಆಗಬೇಕು!

ಹಸಿರು ಬಳೆತೊಟ್ಟ ಕೈಯನ್ನು ಒದರುವುದೆಷ್ಟು ಚೆನ್ನು
ಎಡಗೈಯಲ್ಲಿ ಸೀರೆ ಒತ್ತಿ, ಕೈಗೆ ಸಿಗದೆ
'ಫುಲ್-ಫುಲ್' ಅಂತ ದರ್ಬಾರೆಲ್ಲಾ ಓಡಾಡೋದೆ ಒಂದು ಚೆನ್ನ
ಗೋಳಿಗೆ ತಕ್ಕ ಹಾಗೆ ಲಯಬದ್ಧಗುಲ್ಲು!

ಅವಳು ಅತ್ತಾಗ, ಹಿಂಜಿದ ಮೂಗಿನ ಮೂಗುತಿಯ
ಕೆಂಪು ಹರಳಲ್ಲಿ ಆಹಾ ಎಂಥಾ ಮಿನುಗು
ಆಹಾ! ಭೇಷ್! ಕಂಚಿನ ಕಂಠ | ಅದ್ಭುತಗಾಯಕಿ
ನಂಬಲೇ ಇಲ್ಲ ಯಾರೂ! ಭೀಮನಿಗೂ ಬೆರಗು!

ಮೈಯೆಲ್ಲಾ ಬೆವರಿನ ಹನಿಗಳು, ಹನಿಗಳಲ್ಲಿ ಸುತ್ತೂ ನಿಂತ
ಕೌರವರ ಕಿರೀಟದ ಪಚ್ಚೆ ವಜ್ರದ ನೆರಳು |
ಆಕೆ ಮೈಯೆಲ್ಲಾ ಹಸಿರು. ಅರಣ್ಯ ಉಟ್ಟಂತೆ ಹಸಿರು ಸೀರೆ
ಎಲ್ಲಾ ಹಸಿರು ಆಕೆ ಕಣ್ಣೊಂದು ಬಿಟ್ಟು.

ಪಾಪ ದುಶ್ಶಾಸನ ಆತಂಕದಿಂದ ರೇಗುತ್ತಾನೆ
ಎಳೆಯುತ್ತಾ ಗಾಳಿಯ ಸೆರಗು, ಅಲ್ಲೂ ಹಸಿರು ರಂಗು;
ನೀಲಿಗೆ ಮೊರೆ ಹೊಕ್ಕಿದ್ದಾಳೆ ದ್ರೌಪದಿ; ನೀಲಾಂಗನಲ್ಲಿ ನೀಲಾರ್ಪಿತ!
ಹಸಿರು ಧಾರಿಣಿಗೆ ವಿಶಾಲ ನೀಲಿಯ ಕಾವಲು



# ಎಸ್.ಎಲ್. ಭೈರಪ್ಪನವರ 'ಗೃಹಭಂಗ'-ಒಂದು ವಿಶ್ಲೇಷಣೆ

*ಎನ್. ಶ್ರೀನಿವಾಸ ಉಡುಪ (ಬೆಂಗಳೂರು)*

1970ರಲ್ಲಿ ಮೊದಲಬಾರಿಗೆ ಪ್ರಕಟವಾದ ಭೈರಪ್ಪನವರ 'ಗೃಹಭಂಗ' ಇಷ್ಟು ವರ್ಷಗಳ ನಂತರವೂ ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡು ಬಂದಿರುವುದೇ ಅದರ ಶ್ರೇಷ್ಠತೆಗೆ ಸಾಕ್ಷಿ ಹೇಳುವಂತಿದೆ. ಅನೇಕ ಮುದ್ರಣಗಳನ್ನು ಕಂಡಿರುವ ಈ ಕಾದಂಬರಿ ಭಾರತದ ಹದಿಮೂರು ಭಾಷೆಗಳಿಗೆ ಅನುವಾದಿಸಲ್ಪಟ್ಟಿದ್ದು, ಭಾರತೀಯ ಸಾಹಿತ್ಯದಲ್ಲಿನ ಚಿರಕೃತಿಗಳ ಸಾಲಿನಲ್ಲಿ ತನ್ನ ಸ್ಥಾನವನ್ನು ಗಳಿಸಿಕೊಂಡಿದೆ.

ಹೀಗೆ ಶ್ರೇಷ್ಠತೆ ಮತ್ತು ಜನಪ್ರಿಯತೆ-ಎರಡನ್ನೂ ಒಳಗೊಂಡಿರುವ 'ಗೃಹಭಂಗ' ಕಾದಂಬರಿಯಲ್ಲಿ ಭೈರಪ್ಪನವರು ಯಾವುದೇ ಸೈದ್ಧಾಂತಿಕ ವಿಚಾರಗಳನ್ನು ಚರ್ಚಿಸಿಲ್ಲ. ಅವರ ಬಹುತೇಕ ಕಾದಂಬರಿಗಳಲ್ಲಿ ಕಾಣುವ ಧಾರ್ಮಿಕ ಸಮಸ್ಯೆಯಾಗಲೀ, ಸಾಮಾಜಿಕ ಸಂಘರ್ಷವಾಗಲೀ ಇಲ್ಲಿ ಕಾಣುವುದಿಲ್ಲ. ಅವರೇ ಹೇಳಿಕೊಂಡಿರುವಂತೆ ಇಲ್ಲಿರುವುದು 'ವಸ್ತು ನಿಷ್ಠವಾಗಿ ಜೀವನವನ್ನು ಕಾಣುವ ಪ್ರಯತ್ನ'. ಆದ್ದರಿಂದಲೇ ಈ ಕಾದಂಬರಿಯ ವಸ್ತು-ಮನುಷ್ಯನ ಬದುಕು ಮತ್ತು ಬದುಕಿಗಾಗಿ ನಡೆಯುವ ಹೋರಾಟ- ಎನ್ನಬಹುದು. ಹಳ್ಳಿಯ ಸಾಮಾನ್ಯ ಹೆಂಗಸೊಬ್ಬಳ ಬದುಕಿನ ಏರಿಳಿತಗಳನ್ನು ನಮ್ಮ ಮುಂದಿಡುವುದರ ಮೂಲಕ ಬಾಳಿನ ಹೋರಾಟದ ಚಿತ್ರವನ್ನು ಲೇಖಕರು ಅನನ್ಯವೆನ್ನಿಸುವ ರೀತಿಯಲ್ಲಿ ಈ ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ. ಮಾನವಲೋಕದ ಮೂಲಭೂತ ಪ್ರವೃತ್ತಿಗಳಾದ ಕಾಮ, ದ್ವೇಷ, ಅಸೂಯೆ, ಸ್ವಾರ್ಥ-ಇತ್ಯಾದಿಗಳ ಜೊತೆಗೇ, ಬದುಕಬೇಕೆಂಬ ಛಲ, ಭವಿಷ್ಯದ ಕುರಿತಾದ ಪ್ರತೀಕ್ಷೆ, ಜೀವನವನ್ನು ಇತ್ಯಾತ್ಮಕವಾಗಿ ಕಾಣುವ ದೃಷ್ಟಿ -ಹೀಗೆ ಅತ್ಯಂತ ಸಂಕೀರ್ಣತೆಯಿಂದ ಕೂಡಿದ ಜೀವನ ದ್ರವ್ಯವೇ ಕಾದಂಬರಿಯ ಪುಟಪುಟಗಳಲ್ಲಿ ಸಾಕಾರಗೊಳ್ಳುತ್ತದೆ. ಲೇಖಕರೇ ತಿಳಿಸುವಂತೆ ಕಾದಂಬರಿಯಲ್ಲಿ 1920 ರಿಂದ 1945ರ ವರೆಗಿನ ಅವಧಿಯಲ್ಲಿ ತಿಪಟೂರು ಚನ್ನರಾಯಪಟ್ಟಣ ತಾಲ್ಲೂಕುಗಳಲ್ಲಿ ನಡೆಯುವ ಘಟನೆಗಳ ಪ್ರಸ್ತಾಪವಿದ್ದರೂ, ಅಲ್ಲಿನ ನಿಜಧ್ವನಿ ಕೇವಲ ನಿರ್ದಿಷ್ಟ ಕಾಲ ಖಂಡಕ್ಕಾಗಲೀ, ನಿರ್ದಿಷ್ಟ ಪರಿಸರಕ್ಕಾಗಲೀ ಸೀಮಿತವಾಗುವುದಿಲ್ಲ. ಏಕೆಂದರೆ ಇಲ್ಲಿ ಬರುವ ಬಾಳಿನ ಸಮಸ್ಯೆಗಳು ಸಾರ್ವತ್ರಿಕವಾದುವು; ಸಾರ್ವಕಾಲಿಕವೆನ್ನಿಸುವಂಥವು. ಆದರೆ ಕಾಲದೇಶಗಳ ಹಿನ್ನೆಲೆಯನ್ನು ಸೂಚಿಸಿ, ಲೇಖಕರು ಕಥೆಗೊಂದು ಸೂಕ್ತ ಚೌಕಟ್ಟನ್ನು ನಿರ್ಮಿಸಿ

ಕೊಟ್ಟಿದ್ದಾರೆ. ಪ್ರಾಕೃತಿಕ ಸ್ಥಿತಿಯಿಂದ ಸಾಂಸ್ಕೃತಿಕ ಸ್ತರಕ್ಕೆ ಮನುಷ್ಯನ ಬದುಕು ವಿಕಸಿತವಾಗುವ ಪ್ರಕ್ರಿಯೆಯೂ ಕಾದಂಬರಿಯ ಧ್ವನಿಯಲ್ಲಿ ಬೆರೆತುಕೊಂಡಿದೆ.

●
●

ಕಾಲ ಮತ್ತು ಪರಿಸರಗಳನ್ನಷ್ಟೇ ದೃಷ್ಟಿಯಲ್ಲಿರಿಸಿಕೊಂಡು ಹೇಳುವುದಾದರೆ 'ಗೃಹಭಂಗ' ದಲ್ಲಿರುವುದು ಹಳೆಯ ಮೈಸೂರಿನ ಬಯಲುಸೀಮೆಯ ಕೆಳಮಧ್ಯಮ ವರ್ಗಕ್ಕೆ ಸೇರಿದ ಎರಡು ಬ್ರಾಹ್ಮಣ ಕುಟುಂಬಗಳ ಕಥೆ. ರಾಮಸಂದ್ರ ಮತ್ತು ನಾಗಲಾಪುರ-ಎಂಬ ಊರುಗಳೇ ಇಲ್ಲಿನ ಕ್ರಿಯಾಕ್ಷೇತ್ರಗಳು. ರಾಮಸಂದ್ರ ಶ್ಯಾನುಭೋಗ್ ರಾಮಣ್ಣನವರು ತೀರಿಕೊಂಡಿದ್ದಾರೆ. ಅವರ ವಿಧವೆ ಗಯ್ಯಾಳಿ ಗಂಗಮ್ಮ ಮತ್ತು ಅವರ ಇಬ್ಬರು ಉಢಾಳ ಮಕ್ಕಳಾದ ಚನ್ನಿಗರಾಯ ಹಾಗೂ ಅಪ್ಪಣ್ಣಯ್ಯನವರ ಕಥೆ ಕಾದಂಬರಿಯ ಒಂದು ಧಾರೆಯಾದರೆ, ನಾಗಲಾಪುರದ ಕಂಠೀ ಜೋಯ್ಸರು, ಅವರ ಮಗಳು ನಂಜಮ್ಮ ಹಾಗೂ ಮಗ ಕಲ್ಲೇಶ - ಇವರ ಕಥೆ ಇನ್ನೊಂದು ಧಾರೆ. ಗಂಗಮ್ಮನ ಮನೆಗೆ ಸೊಸೆಯಾಗಿ ಬಂದು, ಎಲ್ಲ ರೀತಿಯಲ್ಲಿಯೂ ಪಶುವಿನಂತೆ ಬದುಕುವ ಚನ್ನಿಗರಾಯನ ಪತ್ನಿಯಾಗಿ, ಬಾಳಿನ ಹೋರಾಟದಲ್ಲಿ ಪಾಲ್ಗೊಳ್ಳುವ ನಂಜಮ್ಮನ ಬದುಕಿನ ವ್ಯಥೆಯ ಕಥೆಯೇ ಕಾದಂಬರಿಯ ಮುಖ್ಯಧಾರೆ. ಗಂಗಮ್ಮ ಮತ್ತು ಅವಳ ಮಕ್ಕಳಿಬ್ಬರೂ ಶುದ್ಧಪ್ರಾಕೃತರು. ಅಕ್ಷರ ದಾರಿದ್ರ್ಯ, ವಿವೇಕ ದಾರಿದ್ರ್ಯ - ಇವುಗಳ ಜೊತೆಗೆ ಆರ್ಥಿಕ ದಾರಿದ್ರ್ಯದಿಂದಲೂ ಆವರಿಸಲ್ಪಟ್ಟ ಈ ವ್ಯಕ್ತಿಗಳಿಗೂ, ಸಂಸ್ಕೃತಿಗೂ ಧ್ರುವಗಳಷ್ಟು ಅಂತರ. ಗಯ್ಯಾಳಿ ಗಂಗಮ್ಮನಿಗಾಗಲೀ, ಹೊಟ್ಟೆ ಬಾಕ ಚನ್ನಿಗರಾಯನಿಗಾಗಲೀ, ಹುಂಬ ಅಪ್ಪಣ್ಣಯ್ಯನಿಗಾಗಲೀ ಬದುಕಿನಲ್ಲಿ ಯಾವ ಪುರುಷಾರ್ಥದ ಕುರಿತೂ ಚಿಂತೆಯಿಲ್ಲ. ಇಂಥ ರೂಕ್ಷ ಕುಟುಂಬಕ್ಕೆ ಸೊಸೆಯಾಗಿ ಬಂದ ನಂಜಮ್ಮ ಸಂವೇದನಾ ರಹಿತವೂ ಕ್ರೂರವೂ ಆದ ಪರಿಸರದಲ್ಲಿ ಬೆರಗು ಗೊಳಿಸುವಷ್ಟು ಧೈರ್ಯದಿಂದ ಬದುಕಿಗಾಗಿ ಹೋರಾಡುತ್ತಾಳೆ; ತನ್ನ ಕುಟುಂಬದ ಗೌರವಕ್ಕಾಗಿ ತನ್ನ ಮಕ್ಕಳಿಗಾಗಿ, ಎಲ್ಲ ಕಷ್ಟಗಳಿಗೂ ಎದೆಯೊಡ್ಡುತ್ತಾಳೆ. ಆಕೆಯ ಛಲ, ವಿವೇಕ, ಧೀಮಂತಿಕೆ ಅಸಾ ಮಾನ್ಯ. ಕಿತ್ತುತಿನ್ನುವ ಬಡತನದ ಮಧ್ಯೆ ರೋಗರುಜಿನಗಳ ನಡುವೆ, ತನ್ನ ಮಕ್ಕಳ ಸಾವಿನ ಎದುರಿನಲ್ಲಿ ಬದುಕನ್ನು ಒಂದು ವ್ರತದಂತೆ ಸ್ವೀಕರಿಸುತ್ತಾಳೆ. ಕೊನೆಗೂ ಅವಳು ಬಾಳ್ವೆಯ ಹೋರಾಟದಲ್ಲಿ ಗೆಲ್ಲುತ್ತಾಳೆ ಆದರೆ ಮೃತ್ಯುವಿನೆದುರು ಸೋಲುತ್ತಾಳೆ. ನಂಜಮ್ಮನ ಬದುಕಿನ ಕಥೆಯನ್ನು ಓದಿದಾಗ, 'ಏಕೋ ರಸಃ ಕರುಣ ಏವ' ಎಂಬ ಭವಭೂತಿಯ ಮಾತು ಸತ್ಯವೆನ್ನಿಸುತ್ತದೆ.

ಕಾದಂಬರಿಗೆ ತಾವು ಇಟ್ಟಿರುವ ಶೀರ್ಷಿಕೆಯ ಬಗ್ಗೆ ಕಾದಂಬರಿಕಾರರು ತಮ್ಮ ಮಾತುಗಳಲ್ಲಿ ಅತೃಪ್ತಿ ಸೂಚಿಸಿದ್ದಾರೆ. ಆದರೆ ನಿಜವಾಗಿಯೂ ಕಾದಂಬರಿಯುದ್ದಕ್ಕೂ 'ಗೃಹಭಂಗ'ದ ಪರಿಕಲ್ಪನೆ ಬೆಳೆಯುತ್ತಲೇ ಹೋಗುತ್ತದೆ. 'ಭಂಗ' ಎಂಬ ಪದಕ್ಕೆ ಮುರಿಯುವಿಕೆ, ಚೂರು, ಸೋಲು, ನಾಶ, ಕಷ್ಟ, ಅವಮಾನ-ಇತ್ಯಾದಿ ಅರ್ಥ ಛಾಯೆಗಳಿವೆ. ಈ ಎಲ್ಲ ಅರ್ಥಛಾಯೆಗಳ ದೃಷ್ಟಿಯಿಂದಲೂ ಕಾದಂಬರಿಗೆ 'ಗೃಹಭಂಗ' ಎಂಬ ಶೀರ್ಷಿಕೆ ತುಂಬಾ ಉಚಿತವಾದುದು - ಎನ್ನಿಸುತ್ತದೆ. ಕಾದಂಬರಿಯ ಮೊದಲ ಅಧ್ಯಾಯದಲ್ಲಿಯೇ ಗಂಗಮ್ಮನ ಹುಂಬ ಮಕ್ಕಳಾದ ಚನ್ನಿಗರಾಮಯ್ಯ ಮತ್ತು ಅಪ್ಪಣ್ಣಯ್ಯ ತಾಯಿಯ ಮೇಲಿನ ಸಿಟ್ಟಿನಿಂದಾಗಿ ಸ್ವಂತ ಮನೆಯ ಹೆಂಚುಗಳನ್ನೇ ಒನಕೆಯಿಂದ ಕುಟ್ಟಿಪುಡಿಮಾಡುತ್ತಾರೆ. ಈ ಘಟನೆಯಿಂದ ಉಂಟಾಗುವ ಸರಪಳಿ ಕ್ರಿಯೆ ಇಡೀ ಕಾದಂಬರಿಯನ್ನು ಅಲೆ ಅಲೆಯಾಗಿ ವ್ಯಾಪಿಸುತ್ತದೆ. ಹೆಂಚೊಡೆದು ತಲೆ ತಪ್ಪಿಸಿಕೊಳ್ಳಲು ಹೊರಟ ಅಪ್ಪಣ್ಣಯ್ಯ ಊರವರ ಕಬ್ಬಿನ ಗದ್ದೆಗೆ ಬೆಂಕಿ ಹಚ್ಚುತ್ತಾನೆ. ಇದರಿಂದಾಗಿ ಶಿವೇಗೌಡ ಗಂಗಮ್ಮನ ಮನೆ ಮತ್ತು ಭೂಮಿಯನ್ನು ವಶಪಡಿಸಿಕೊಳ್ಳಲು ಕಾರಣವಾಗುತ್ತದೆ. ಹೀಗೆ

ಮನೆಯನ್ನು ಒಡೆಯುವ ಕ್ರಿಯೆ ಒಂದು ಸಂಕೇತವೋ ಎಂಬಂತೆ ಕಾದಂಬರಿಯಲ್ಲಿ ಹಲವು ಬಾರಿ ಕಾಣಿಸಿಕೊಳ್ಳುತ್ತದೆ. ಅಪ್ಪಣ್ಣಯ್ಯ ತಾನೇ ಕಷ್ಟಪಟ್ಟು ಕಟ್ಟಿದ ಮನೆಯನ್ನು ಹೆಂಡತಿಯ ಮೇಲಿನ ಆಕ್ರೋಶದಿಂದ ಬೆಂಕಿ ಹಚ್ಚಿಸುಡುತ್ತಾನೆ. ಪರಿಣಾಮವಾಗಿ ಅವನ ಸಾಂಸಾರಿಕ ಜೀವನವೇ ಉರಿದು ಹೋಗುತ್ತದೆ. ಶಾನುಭೋಗ ಶಾಮಣ್ಣ ಕಂಠೀ ಜೋಯಿಸರ ಮನೆಯ ಮೇಲೆ ಕಲ್ಲು ತೂರಿಸಿ, ಹೆಂಚುಗಳನ್ನು ಒಡೆಸುತ್ತಾನೆ; ಪ್ರತಿಯಾಗಿ ಕಂಠೀ ಜೋಯಿಸರು ಎಲ್ಲರೆದುರಿಗೇ ಶಾಮಣ್ಣನ ಮನೆಯ ಹೆಂಚುಗಳನ್ನು ಪುಡಿ ಪುಡಿಮಾಡಿ ತಮ್ಮ ಪೌರುಷ ಪ್ರದರ್ಶಿಸುತ್ತಾರೆ. ಇದರ ಫಲವಾಗಿ ನಡೆದ ಕೋರ್ಟುಕಟ್ಟಳೆಯಲ್ಲಿ ಕಂಠೀ ಜೋಯಿಸರೇ ಗೆದ್ದರೂ, ಅವರ ಮತ್ತು ಶಾಮಣ್ಣನ ನಡುವೆ ಇದ್ದ ದ್ವೇಷ ಮತ್ತಷ್ಟು ಉಲ್ಬಣಿಸಿ, ಕಂಠೀ ಜೋಯಿಸರು ಗೃಹತ್ಯಾಗ ಮಾಡಬೇಕಾಗುತ್ತದೆ.

ಹೀಗೆ ಭೌತಿಕವಾಗಿ ಮನೆಯನ್ನು ಒಡೆಯುವ ಕ್ರಿಯೆಯ ಜೊತೆ ಜೊತೆಗೇ ಮಾನಸಿಕವಾಗಿಯೂ 'ಗೃಹಭಂಗ'ದ ಕ್ರಿಯೆ ನಡೆಯುತ್ತಲೇ ಇರುತ್ತದೆ. ಗಯ್ಯಾಳಿ ಗಂಗಮ್ಮ ಮತ್ತು ಸೋಮಾರಿ ಚನ್ನಿಗರಾಯನ ಕಾರಣದಿಂದಾಗಿ ನಂಜಮ್ಮ ತನ್ನ ಸ್ವಂತಮನೆಗೇ ಎರವಾಗುತ್ತಾಳೆ; ಕಮಲುವಿನ ಒರಟುತನದಿಂದ ಕಲ್ಲೇಶನ ಸಂಸಾರ ಛಿದ್ರವಾಗಿ, ಆತ ಅಡ್ಡದಾರಿ ಹಿಡಿಯುತ್ತಾನೆ. ರೇವಣ್ಣ ಶೆಟ್ಟಿಯ ವಿಲಾಸೀ ಜೀವನದ ಪರಿಣಾಮವಾಗಿ, ಆತನ ಪತ್ನಿ ಸರ್ವಕ್ಕ ಶೋಷಣೆಗೆ ಒಳಗಾಗುತ್ತಾಳೆ; ಜೊತೆಗೆ ಅವನ ಮಗಳು ಅನೈತಿಕ ಗರ್ಭಧರಿಸಿ, ಪ್ರಾಣಕಳೆದುಕೊಳ್ಳುತ್ತಾಳೆ. ಸುಸಂಸ್ಕೃತ ಸುಖೀ ಸಂಸಾರವಾಗಿ ರೂಪುಗೊಳ್ಳಲಿದ್ದ ಸೂರ್ಯನಾರಾಯಣ ಮತ್ತು ಪಾರ್ವತಿಯರ ದಾಂಪತ್ಯಜೀವನ ಆರಂಭದಲ್ಲಿಯೇ ಮುರುಟಿಹೋಗುತ್ತದೆ. ಹೀಗೆ ಕಾದಂಬರಿಯುದ್ದಕ್ಕೂ ಮುರಿದುಹೋಗುವ, ನಾಶವಾಗುವ, ಸೋಲು ಅವಮಾನಗಳನ್ನು ಅನುಭವಿಸುವ ಹಲವು ಹತ್ತು ಸಂಗತಿಗಳು ಬರುತ್ತವೆ. ಮನೆಯನ್ನು ಕೆಡಹುವ ಕ್ರಿಯೆಯ ಜೊತೆ ಜೊತೆಗೇ, ಅದನ್ನು ಕಟ್ಟುವ, ಉಳಿಸಿಕೊಳ್ಳುವ ಕ್ರಿಯೆಯೂ ಜರುಗುತ್ತದೆ. ಬಿದ್ದು ಹೋಗುವಂತಿದ್ದ ತನ್ನ ಸಂಸಾರವನ್ನು ಎತ್ತಿ ನಿಲ್ಲಿಸಲು ನಂಜಮ್ಮ ಇನ್ನಿಲ್ಲವೆಂಬಂತೆ ಹೋರಾಡುತ್ತಾಳೆ. ಶ್ಯಾನುಭೋಗಿಕೆಯ ಲೆಕ್ಕ ಬರೆದು, ಮುತ್ತುಗದ ಎಲೆ ಹಚ್ಚಿ, ಸೊಪ್ಪು ತರಕಾರಿ ಬೆಳಸಿ, ಏಕಾಂಗಿಯಾಗಿ ಅವಳು ಸಂಸಾರವನ್ನು ನಿಭಾಯಿಸುತ್ತಾಳೆ. ಜಂಗಮ ಮಾದೇವಯ್ಯ, ಪಟೇಲ್ ಗುಂಡೇಗೌಡ, ಮೇಷ್ಟ್ರು ವೆಂಕಟೇಶಯ್ಯ-ಮುಂತಾದವರು ಆಕೆಗೆ ಒತ್ತಾಸೆಯಾಗಿ ನಿಲ್ಲುತ್ತಾರೆ. ಅವಳ ಗುರಿ ಇನ್ನೇನು ಕೈಗೂಡಿತೆನ್ನುವಾಗ ವಿಧಿ ಪ್ಲೇಗಿನ ರೂಪದಲ್ಲಿ ಅವಳು ಕಟ್ಟಿದ ಮನೆಯನ್ನು ಒಡೆದು ಹಾಕುತ್ತದೆ. ಮದುವೆಯಾಗಿ ಗಂಡನ ಮನೆಗೆ ಹೊರಡಲಿದ್ದ ಮಗಳು ಪಾರ್ವತಿ, ಭವಿಷ್ಯ ಉಜ್ವಲವಿರುವುದೆಂಬ ನಿರೀಕ್ಷೆ ಹುಟ್ಟಿಸಿದ್ದ ಮಗ ರಾಮಣ್ಣ ಏಕಕಾಲದಲ್ಲಿ ಪ್ಲೇಗಿಗೆ ತುತ್ತಾಗುತ್ತಾರೆ. ಉಳಿದ ಒಬ್ಬನೇ ಮಗ ವಿಶ್ವನಲ್ಲಿಯೇ ತನ್ನೆಲ್ಲ ಭರವಸೆಯನ್ನು ಕೇಂದ್ರೀಕರಿಸಿ, ನಂಜಮ್ಮ ತನ್ನ ಸ್ವಂತ ಮನೆ ಕಟ್ಟುವ ಸಾಹಸಕ್ಕೆ ಕೈ ಹಾಕುತ್ತಾಳೆ. ಆದರೆ ಆ ಕೆಲಸ ಮುಗಿಯುವ ಹಂತದಲ್ಲಿದ್ದಾಗ, ಆಕೆಯೂ ಪ್ಲೇಗಿಗೆ ತುತ್ತಾಗಿ ಸಾಯುತ್ತಾಳೆ. ಒಟ್ಟಿನಲ್ಲಿ ನಂಜಮ್ಮ ಗೃಹಭಂಗದ ವಿಷವರ್ತುಲದಲ್ಲಿ ಸಿಕ್ಕಿಹಾಕಿಕೊಂಡು, ಬದುಕನ್ನು ಮುಗಿಸುವ ದುರಂತ ನಾಯಕಿಯಾಗುತ್ತಾಳೆ.

ಇಚ್ಛಾಶಕ್ತಿ ಮತ್ತು ಮನುಷ್ಯ ಪ್ರಯತ್ನಗಳಿಗೆ ಪ್ರತೀಕವಾಗಿ ನಿಲ್ಲುವ ನಂಜಮ್ಮನ ಹೋರಾಟ ಸಾವಿನಲ್ಲಿ ಕೊನೆಗೊಂಡರೂ ಆಕೆಯ ಸೋಲು ಸೋಲಲ್ಲವೆನ್ನಿಸುತ್ತದೆ. ನಂಜಮ್ಮ ಮನೆಕಟ್ಟಿ ಮುಗಿಸುತ್ತಿರುವಾಗ ಮಾದೇವಯ್ಯನವರು ಹೇಳುತ್ತಾರೆ - "ನಂಜವ್ವ, ಅಪ್ಪಣ್ಣಯ್ಯ ಕಬ್ಬಿನ ಗದ್ದೆಗೆ ಬೆಂಕಿ ತಗಲ್‌ಸಿದನಲ್ಲಾ, ಅದಕ್ಕೆ ತಾನೇ ನಿಮ್ಮ ಜಮೀನೆಲ್ಲಾ ಹ್ವಾದದ್ದು? ಅವತ್ತು ಅವನೂ, ಚಿನ್ನಯ್ಯಾ

ಇಬ್ರೂ ಸೇರಿ, ಮನೇ ಮ್ಯಾಲ್ ಹತ್ತಿ, ಒನಕೆ ತಗುಂಡಿ ಹೆಂಚು ಒಡೆದು ಹಾಕಿದ್ರು. ನಾನು ಹೇಳಿದ್ನಲ್ಲ- ಮನೆ ವಡೆಯಾದು, ಸುಲಭ, ಕಟ್ಟಾದು ಕಷ್ಟ ಅಂತ. ಅಂತೂ ನೀನು ಸ್ವಂತ ಮನೆ ಕಟ್ಟಿ ಮುಗಿಸ್ದೆ''. ಈ ಮಾತು'ಗೃಹಭಂಗ' ಎಂಬ ಪರಿಕಲ್ಪನೆ ಕಾದಂಬರಿಯ ಉದ್ದಕ್ಕೂ ಹೇಗೆ ಶ್ರುತಿ ಮೀಟುತ್ತದೆ- ಎಂಬುದನ್ನು ಸಾಬೀತುಪಡಿಸುತ್ತದೆ.

ನಂಜಮ್ಮನಲ್ಲದೇ ಇಲ್ಲಿ ಬರುವ ಇನ್ನೂ ಅನೇಕ ಪಾತ್ರಗಳು ಮನೆಯಿದ್ದೂ ಮನೆಯಿಲ್ಲದ ಅನಿಕೇತನರು. ಯಾವುದೇ ಕಾರಣಕ್ಕಾಗಿ ವಿರಕ್ತರಾಗಿರುವ ಮಾದೇವಯ್ಯನವರಂತೂ ಸರಿಯೇ. ಗೃಹಸ್ಥರಾಗಿದ್ದೂ, ಜೀವನದ ಎಲ್ಲ ಸುಖಗಳನ್ನೂ ಆಸ್ವಾದಿಸುವ ಶಕ್ತಿಯಿರುವ ಕಂಠೀ ಜೋಯಿಸರೂ ಒಂದು ಅರ್ಥದಲ್ಲಿ ಪರಿವ್ರಾಜಕರೇ. ಅವರ ಮಗ ಕಲ್ಲೇಶನಿಗೆ ಹೆಸರಿಗಷ್ಟೇ ಮನೆ. ಹೆಂಡತಿ ಕಮಲುವಿನ ಚಂಡಿತನದಿಂದಾಗಿ ಆತ ಮನೆಯ ಹೊರಗೇ ಸುಖವನ್ನರಸುತ್ತಾನೆ. ಗಂಗಮ್ಮ, ಚನ್ನಿಗರಾಯ ಹಾಗೂ ಅಪ್ಪಣ್ಣಯ್ಯ ಹೊಟ್ಟೆ ತುಂಬಿಸಿಕೊಳ್ಳಲು ಅಲೆಮಾರಿ ಜೀವನ ನಡೆಸುವಂಥವರು. ಕಾದಂಬರಿಯ ಕೊನೆಯಲ್ಲಿ ಹುಡುಗ ವಿಶ್ವ ಕೂಡಾ ತಾಯಿಯನ್ನು ಕಳೆದುಕೊಂಡು, ತಂದೆಯಿದ್ದೂ ಇಲ್ಲದಂಥ ಸ್ಥಿತಿಯಲ್ಲಿ, ಮಾದೇವಯ್ಯನವರ ಸಂಗಡ ಊರು ಬಿಟ್ಟು, ಅಜ್ಞಾತ ಗಂತವ್ಯದ ದಿಕ್ಕಿನಲ್ಲಿ ನಡೆಯುತ್ತಾನೆ. ಈ ರೀತಿ 'ಇರುವುದೆಲ್ಲವ ಬಿಟ್ಟು, ಇರದುದರೆಡೆಗೆ ನಡೆಯುವ' ಇಲ್ಲಿನ ಮುಖ್ಯಪಾತ್ರಗಳು ಕುಟುಂಬ ಜೀವನ ಛಿದ್ರವಾಗಿ, ನೋವು, ಹತಾಶೆ, ಅವಮಾನಗಳಿಂದ ನರಳುತ್ತಿರುವ ಗೃಹಭಂಗ ಪೀಡಿತರು. ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ ಕಾದಂಬರಿಗೆ 'ಗೃಹಭಂಗ' ಎಂಬ ಶೀರ್ಷಿಕೆ ತುಂಬ ಸೂಕ್ತ, ಸಮಂಜಸ -ಎನ್ನಿಸುತ್ತದೆ.



ಪರಂಪರಾಗತ ಸಾಮಾಜಿಕ ವ್ಯವಸ್ಥೆಗೆ ಅನುಗುಣವಾಗಿ ಬಾಳುತ್ತಿದ್ದ ಜನರಿಂದ ಕೂಡಿದ ಗ್ರಾಮೀಣ ಜೀವನದ ವಿವರ ಪೂರ್ಣಚಿತ್ರ 'ಗೃಹಭಂಗ' ಕಾದಂಬರಿಯಲ್ಲಿ ಸಮೃದ್ಧವಾಗಿ ದೊರೆಯುತ್ತದೆ. ಬ್ರಿಟಿಷರ ಆಡಳಿತ ಪದ್ಧತಿಯಿದ್ದ ಆಕಾಲದಲ್ಲಿ ಡೆಪ್ಯುಟೀ ಕಮೀಷನರೇ ಮೊದಲಾದ ಸರ್ಕಾರೀ ಅಧಿಕಾರಿಗಳನ್ನು ಕುರಿತು ಜನರ ಮನಸ್ಸಿನಲ್ಲಿ ಭಯ ಗೌರವಗಳಿತ್ತು. ಹಳ್ಳಿಗಳಲ್ಲಿ ಪಟೇಲರು, ಶ್ಯಾನುಭೋಗರು ಸರ್ವಶಕ್ತರಿದ್ದಂತೆ. ಅವರನ್ನು ಕುರಿತು ಜನಗಳಿಗೆ ಗೌರವಕ್ಕಿಂತಲೂ ಭಯಹೆಚ್ಚು. ತಮಗಿದ್ದ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಜನಗಳ ಅಜ್ಞಾನವನ್ನೇ ಬಂಡವಾಳ ಮಾಡಿಕೊಂಡು ತಮ್ಮ ಸ್ವಾರ್ಥಸಾಧನೆ ಮಾಡಿಕೊಳ್ಳುತ್ತಿದ್ದ ಶಿವಲಿಂಗಯ್ಯ, ಸಿವೇಗೌಡರಂಥವರೂ, ರೇವಣ್ಣಶೆಟ್ಟಿಯಂಥ ಪೂಟ್ ಲಾಯರಿಗಳೂ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ಜೈಮಿನಿ ಓದುವುದನ್ನು ಕಲಿತವನೇ ಹಳ್ಳಿಗರ ಪಾಲಿಗೆ ಮಹಾಪಂಡಿತ. ಸ್ತ್ರೀ ಶಿಕ್ಷಣವೆಂಬುದು ಕನಸಿನಮಾತು. ಇಂಥ ಸಂದರ್ಭದಲ್ಲಿ ನಂಜಮ್ಮ ಸ್ವತಃ ಶ್ಯಾನುಭೋಗಿಕೆ ಲೆಕ್ಕ ಬರೆಯುವ ಸಾಹಸ ಮಾಡಿದಾಗ, ಅತ್ತೆ ಗಂಗಮ್ಮ-''ಹೆಂಗಸು ಮುಂಡೆ ಕೈಲಿ ಲೆಕ್ಕ ಮುಟ್ಟಿಸ್ತಾರೇನ್ರೀ?'' ಎಂಬ ಯಕ್ಷಪ್ರಶ್ನೆ ಹಾಕುತ್ತಾಳೆ. ಇಂಥ ಸಾಮಾಜಿಕ ಮೌಢ್ಯಗಳೇ ಅಂದಿನ ಜೀವನದ ಮುಖ್ಯ ಪಿಡುಗುಗಳು. ಬಹಳಷ್ಟು ವಿವೇಚನೆಯಿರುವ ನಂಜಮ್ಮನೂ ಇದಕ್ಕೆ ಹೊರತಾಗಿ ಉಳಿಯುವುದಿಲ್ಲ. ಅಯ್ಯಾಶಾಸ್ತ್ರಿ, ಅಣ್ಣಾಜೋಯಿಸರಂಥ ನರಿಬುದ್ಧಿಯ ಜನ ಇಂಥ ಸಾಮಾಜಿಕ ಮೌಢ್ಯದಿಂದ ಪ್ರಯೋಜನ ಪಡೆಯುತ್ತಾರೆ. ಪ್ಲೇಗ್, ಕಜ್ಜಿ ಮುಂತಾದ ಕಾಹಿಲೆಗಳು ಬಂದಾಗ ಮಾರಮ್ಮ, ನಾಗದೇವತೆಗಳನ್ನು ಆರಾಧಿಸುವುದೂ, ಕಿತ್ತು ತಿನ್ನುವ ಬಡತನದಲ್ಲಿಯೂ ಗಂಗಮ್ಮ

ಋಷಿ ಪಂಚಮೀ ವ್ರತ ನಡೆಸುವುದೂ, ಶ್ರಾದ್ಧದಲ್ಲಿ ತುಪ್ಪದಲ್ಲಿ ಕರಿದ ತಿಂಡಿಯನ್ನೇ ಅಣ್ಣಾಜೋಯಿಸ ಗಿಟ್ಟಿಸಿಕೊಳ್ಳುವುದೂ, ನಂಜಮ್ಮ ತೀರಿಕೊಂಡ ಕೆಲವೇ ದಿನಗಳಲ್ಲಿ ಹಣ್ಣುಗಡ್ಡದ ಚನ್ನಿಗರಾಯ ಮತ್ತೊಂದು ಮದುವೆಗೆ ಸಿದ್ಧನಾಗುವುದು-ಇಂಥ ಅನೇಕ ಪ್ರಸಂಗಗಳು ಅಂದಿನ ಸಾಮಾಜಿಕ ಜೀವನದ ಮೂರ್ಖ ಮುಖವನ್ನು ತೋರಿಸುತ್ತದೆ.

ಈ ಬಗೆಯ ಪರಂಪರಾಗತ ಸಾಮಾಜಿಕ ವ್ಯವಸ್ಥೆ ಆಧುನಿಕ ಮೌಲ್ಯಗಳಿಗೆ ಮುಖಾಮುಖಿಯಾಗಿ, ಪಲ್ಲಟಗೊಳ್ಳುವ ಪ್ರಕ್ರಿಯೆಯೂ ಕಾದಂಬರಿಯ ಹರಹಿನಲ್ಲಿ ಕಾಣಿಸಿಕೊಳ್ಳುತ್ತದೆ. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅಲ್ಲಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳು ಕಾಣಿಸಿಕೊಂಡು, ಜನ ಅಕ್ಷರ ವಿದ್ಯೆಯ ಮಹತ್ವವನ್ನು ನಿಧಾನವಾಗಿ ಅರ್ಥಮಾಡಿಕೊಳ್ಳುತ್ತಾರೆ. ನಂಜಮ್ಮನ ಮಗ ರಾಮಣ್ಣ ಸಾಯುವ ಸಮಯದಲ್ಲಿ ಮಿಡ್ಲ್‌ಸ್ಕೂಲ್ ನಾಲ್ಕನೇ ತರಗತಿಯಲ್ಲಿ ಕ್ಲಾಸಿಗೆ ಮೊದಲಿಗನಾಗಿರುತ್ತಾನೆ. ತನ್ನ ಅಕ್ಕ ಪಾರ್ವತಿಗೂ ವಿದ್ಯೆ ಕಲಿಸಿ, ಆಕೆಯನ್ನೂ ಮುಂದಕ್ಕೆ ತರಬೇಕೆನ್ನುವ ಹಂಬಲವೂ ಆತನಲ್ಲಿರುತ್ತದೆ. ಪ್ಲೇಗ್ ಬಂದಾಗ ಮಾರಮ್ಮನ ಹರಕೆಯ ಜೊತೆಗೇ ಇನಾಕ್ಯುಲೇಷನ್ ಹಾಕಿಕೊಳ್ಳುವುದಕ್ಕೂ ಜನ ಮುಂದಾಗುತ್ತಾರೆ. ಕಜ್ಜಿಯ ಕಾಟದಿಂದ ಪರಿಹಾರ ಪಡೆಯಲು ನಾಗರಪೂಜೆಯಷ್ಟೇ ಸಾಲದು; ಅದಕ್ಕಿಂತ ಮಿಲ್ಕ್ ಇಂಜೆಕ್ಷನ್ ಹೆಚ್ಚು ಪರಿಣಾಮಕಾರಿ - ಎಂಬುದನ್ನು ಕೆಲವರಾದರೂ ಅರ್ಥಮಾಡಿಕೊಳ್ಳುತ್ತಾರೆ. ಎತ್ತಿನಗಾಡಿಯಲ್ಲಿ ಪಯಣಿಸುತ್ತಿದ್ದ ಜನ ಬಸ್ಸಿನ ಪ್ರಯಾಣದ ಅನುಭವ ಪಡೆಯುತ್ತಾರೆ. ದೂರದಲ್ಲಿ ನಡೆಯುತ್ತಿದ್ದ ಎರಡನೆಯ ಮಹಾಯುದ್ಧದ ಬಿಸಿ ಹಳ್ಳಿಗರಿಗೂ ತಟ್ಟುತ್ತದೆ. ಇದಕ್ಕೆ ಸಂಬಂಧಿಸಿದಂತೆ ಯುದ್ಧ ನಿಧಿ ಸಂಗ್ರಹಣೆ, ರೇಷನ್ ವ್ಯವಸ್ಥೆ -ಇತ್ಯಾದಿ ಪ್ರಸ್ತಾಪ ಕಾದಂಬರಿಯಲ್ಲಿ ಬರುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಹುಡುಗ ವಿಶ್ವನೂ ಮುಗ್ಧತೆಯಿಂದ ಪಾಲ್ಗೊಂಡು ಭಾಷಣ ಮಾಡುತ್ತಾನೆ; ಪರಿಣಾಮವಾಗಿ ಕೆಲವು ಘಂಟೆಗಳ ಮಟ್ಟಿಗಾದರೂ ಜೈಲುವಾಸದ ಅನುಭವ ಪಡೆಯುತ್ತಾನೆ. ಹೀಗೆ ಆಧುನೀಕರಣದ ಪ್ರಕ್ರಿಯೆ ಮತ್ತು ಅದಕ್ಕನುಗುಣವಾಗಿ ಸ್ಥಿತ್ಯಂತರಗೊಳ್ಳುವ ಸಾಮಾಜಿಕ ವ್ಯವಸ್ಥೆ-ಇವುಗಳನ್ನು ಸೂಕ್ಷ್ಮವಾಗಿ ಕಾದಂಬರಿಕಾರರು ಚಿತ್ರಿಸಿದ್ದಾರೆ.

•

•

ಮೌಢ್ಯ ಮತ್ತು ಸ್ವಾರ್ಥ 'ಗೃಹಭಂಗ' ದಲ್ಲಿನ ದುರಂತಕ್ಕೆ ಮೂಲಕಾರಣವೆನ್ನಬಹುದು. ಕಾದಂಬರಿಯ ಕ್ರಿಯಾಕ್ಷೇತ್ರವಾದ ರಾಮಸಂದ್ರದಲ್ಲಿ ಮೂಲತಃ ವಾಸವಾಗಿರುವವರೆಲ್ಲರೂ, ಒಂದೋ ಮೌಢ್ಯಕ್ಕೆ, ಇಲ್ಲವೇ ವ್ಯಕ್ತಿ ಸ್ವಾರ್ಥಕ್ಕೆ ಪಕ್ಕಾಗಿರುವವರೇ. ಅಲ್ಲಿಗೆ ಹೊರಗಿನಿಂದ ಬಂದ ನಂಜಮ್ಮ, ಮಾದೇವಯ್ಯ, ವೆಂಕಟೇಶಯ್ಯ, ದ್ಯಾದರಸಯ್ಯ, ಅಕ್ಕಮ್ಮ-ಮುಂತಾದವರು ಈ ದೋಷಗಳಿಂದ ದೂರವಿರುವುದರಿಂದಲೇ ಕೇಡಿನ ವಿರುದ್ಧ ಹೋರಾಡುವ, ಇಲ್ಲವೇ ಅದನ್ನು ಎದುರಿಸುವ ಸಾಮರ್ಥ್ಯ ಹೊಂದಿದ್ದಾರೆ. ರಾಮಸಂದ್ರ ನಿವಾಸಿಗಳಾದ ರೇವಣ್ಣಶೆಟ್ಟಿ, ಚನ್ನಿಗರಾಯ, ಗಂಗಮ್ಮ - ಎಲ್ಲರಲ್ಲೂ ಗರಿಷ್ಠಮಟ್ಟದ ಸ್ವಾರ್ಥವಿದೆ. ಗಂಗಮ್ಮನಿಗೆ ತನ್ನ ಮಕ್ಕಳ ಕುರಿತಾದರೂ ಸ್ವಲ್ಪ ಕಾಳಜಿಯಿದೆ. ಚನ್ನಿಗರಾಯನಲ್ಲಿ ಅದೂ ಇಲ್ಲ. ತನ್ನ ಪತ್ನಿ ಮತ್ತು ಮಕ್ಕಳು ಹಸಿವಿನಿಂದ, ಕಾಹಿಲೆಯಿಂದ ನರಳುತ್ತಿದ್ದಾಗ ತಾನು ಮಾತ್ರ ಪುಷ್ಕಳ ಭೋಜನ ಮಾಡಿ, ಗಡದ್ದಾಗಿ ನಿದ್ದೆ ಮಾಡುವ ಪಾಶವೀ ವ್ಯಕ್ತಿತ್ವ ಆತನದು. ನಂಜಮ್ಮ ತೀರಿಕೊಂಡ ನಂತರ ಮಗ ವಿಶ್ವನನ್ನು ಮಾದೇವಯ್ಯನವರು ಕರೆದುಕೊಂಡು ಹೋಗುತ್ತಿದ್ದಾಗ, ಬಾಯಲ್ಲಿದ್ದ ತಾಂಬೂಲರಸವನ್ನು ಉಗುಳಬೇಕಾದೀತೆಂಬ ಭಯದಿಂದ ಮಗನೊಡನೆ ಮಾತಾಡದೇ

ಮಲಗಿಯೇ ಇರುತ್ತಾನೆ ಚನ್ನಿಗರಾಯ ಮಗಳ ಮದುವೆಯ ದಿನದ ಆತನ ನಡತೆಯಂತೂ, ಅವನ ಮೂರ್ಖತನಕ್ಕೆ, ಜಿಹ್ವಾ ಚಾಪಲ್ಯಕ್ಕೆ ಕನ್ನಡಿ ಹಿಡಿಯುತ್ತದೆ. ಜಿಗುಪ್ಸೆ ಎಂಬುದನ್ನು ಒಂದು ರಸವೆಂದು ಭಾವಿಸುವುದಾದರೆ, ಅದಕ್ಕೆ ಚನ್ನಿಗರಾಯ ಪ್ರತೀಕವಾಗುತ್ತಾನೆ. ಕೇವಲ ಪಶುವಿನಂತೆ ಆಹಾರ, ನಿದ್ರೆಭಯ, ಮೈಥುನಗಳಲ್ಲಷ್ಟೇ ಜೀವಂತಿಕೆ ತೋರಿಸುವ ಚನ್ನಿಗರಾಯನ ಸೃಷ್ಟಿ ಪ್ರಾಯಃ ಕನ್ನಡಸಾಹಿತ್ಯದಲ್ಲಿಯೇ ಅನನ್ಯವಾದುದು.

ಶೋಷಣೆಯ ಬೇರೆ ಬೇರೆ ಮುಖಗಳ ದರ್ಶನವೂ ಕಾದಂಬರಿಯಲ್ಲಿ ಕಾಣಸಿಗುತ್ತದೆ. ನಂಜಮ್ಮ, ಸರ್ವಕ್ಕ ಗಂಗಮ್ಮ-ಮುಂತಾದವರು ಹಲವು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಾರೆ. ಅಯ್ಯಾಶಾಸ್ತ್ರೀ, ಅಣ್ಣಾಜೋಯಿಸ ಮೊದಲಾದವರು ಧರ್ಮದ ಹೆಸರಿನಲ್ಲಿ ಶಿವೇಗೌಡ, ಶಿವಲಿಂಗೇಗೌಡ, ಕಾಶಿಂಬಡ್ಡಿ-ಮೊದಲಾದವರು ಆರ್ಥಿಕ ನೆಪದಲ್ಲಿ ಶೋಷಣೆ ನಡೆಸುತ್ತಾರೆ. ಜೊತೆಗೆ ಪ್ಲೇಗು, ಬರಗಾಲ, ಕಜ್ಜಿ-ಮುಂತಾದವುಗಳಿಂದ ಪ್ರಾಕೃತ ಶೋಷಣೆಯೂ ನಡೆಯುತ್ತದೆ.

ಪಾತ್ರಗಳನ್ನು ಕುರಿತು ಹೇಳುವ ಸಂದರ್ಭದಲ್ಲಿಯೇ ಇನ್ನೊಂದು ಮಾತನ್ನೂ ಸೇರಿಸಿಬಿಡಬಹುದು. ಇಲ್ಲಿನ ಕೆಲವು ವ್ಯಕ್ತಿಗಳಲ್ಲಾದರೂ ಪ್ರಾಕೃತಿಕ ಸ್ಥಿತಿಯಿಂದ ಸಾಂಸ್ಕೃತಿಕ ಸ್ತರಕ್ಕೆ ಚಲಿಸುವ ಪ್ರಕ್ರಿಯೆಯನ್ನು ಕಾಣುತ್ತೇವೆ. ಜೀವನಾನುಭವ, ಲೋಕಾನುಭವಗಳಿಂದ ನಂಜಮ್ಮ, ಮಾದೇವಯ್ಯ, ಕಂಠೀಜೋಯ್ಸರು-ಸಹಜವಾಗಿಯೇ ಪಕ್ವವಾಗುತ್ತಾರೆ. ಮೊದಮೊದಲು ಲೌಕಿಕ ಜಗತ್ತಿಗೆ ಮಾತ್ರ ಸೀಮಿತವಾಗಿದ್ದ ನಂಜಮ್ಮನ ಪ್ರವೃತ್ತಿ ಕ್ರಮೇಣ ಅಲೌಕಿದತ್ತಲೂ ಮಿಡಿಯತೊಡಗುತ್ತದೆ. ಮಕ್ಕಳ ಸಾವಿನ ನಂತರ ಆಕೆ ಹೆಚ್ಚು ಅಂತರ್ಮುಖಿಯಾಗುತ್ತಾಳೆ; ಜೀವನದ ಅರ್ಥವೇನೆಂದು ಚಿಂತಿಸತೊಡಗುತ್ತಾಳೆ. ಸ್ವತಃ ಮೃತ್ಯು ಮುಖದಲ್ಲಿದ್ದಾಗ, ಅವಳು ಮಾದೇವಯ್ಯನವರನ್ನು -"(ನಾನು) ಇಷ್ಟು ವರ್ಷ ಬೆಳೆದು....ಇಷ್ಟು ವರ್ಷ ವಳ್ಳೇ ಮಕ್ಕಳನ್ನು ಹೆತ್ತು, ಅವನ್ನ ಕಳ್ಕಂಡು, ಈಗ ಸಾಯಬೇಕೇ? ಇದ್ಯಾಕೆ ಹೀಗೆಲ್ಲಾ ಆಗುತ್ತೆ ಅಯ್ನೋರೇ?"-ಎಂದು ಪ್ರಶ್ನಿಸುವುದು ಅರ್ಥಪೂರ್ಣ. ತನ್ನ ಮಗ ವಿಶ್ವನ ಭವಿಷ್ಯದ ಬಗ್ಗೆ ಚಿಂತಿಸುತ್ತಾ, ನಂಜಮ್ಮ ತನ್ನಲ್ಲಿಯೇ ಹೇಳಿಕೊಳ್ಳುತ್ತಾಳೆ-" ಹುಡುಗನ ಹಿಟ್ಟು ಮುಖ್ಯವಲ್ಲ. ಅವ್ನು ಬುದ್ಧಿವಂತನಾಗಬೇಡ್ವೆ?" ಇದೂ ಆಕೆಯ ವ್ಯಕ್ತಿತ್ವದ ವಿಕಾಸದ ದಿಕ್ಕನ್ನು ಸೂಚಿಸುತ್ತದೆ. ತನ್ನಷ್ಟಕ್ಕೆ ತಾನೇ ಬದುಕುತ್ತಿದ್ದ ಮಾದೇವಯ್ಯನವರು ವಿಶ್ವನ ಭವಿಷ್ಯದ ಜವಾಬ್ದಾರಿಯನ್ನು ತಮ್ಮ ಹೆಗಲಿಗೆ ಹಾಕಿಕೊಳ್ಳುತ್ತಾರೆ. ಹುಂಬನಾಗಿದ್ದ ಅಪ್ಪಣಯ್ಯನೂ ನಿಧಾನವಾಗಿ ಅಂತರ್ಮುಖಿಯಾಗುತ್ತಾನೆ; ಅತ್ತಿಗೆಗಾಗಿ, ಅತ್ತಿಗೆಯ ಮಕ್ಕಳಿಗಾಗಿ ದುಡಿಯುತ್ತಾನೆ. ಪಾರ್ವತಿ, ರಾಮಣ್ಣ ಮತ್ತು ನಂಜಮ್ಮ ತೀರಿಕೊಂಡಾಗ, ಅವನಲ್ಲಿ ಅದುವರೆಗೆ ಸುಪ್ತವಾಗಿದ್ದ ಮನುಷ್ಯತ್ವ ಎಚ್ಚೆತ್ತು ಕೊಳ್ಳುತ್ತದೆ. ಅನೈತಿಕ ರೀತಿಯಲ್ಲಿ ಬದುಕು ಸಾಗಿಸುತ್ತಿದ್ದ ಸರಸಿಯ ಹೃದಯದಲ್ಲೂ ವಿಶ್ವನಿಗಾಗಿ ವಾತ್ಸಲ್ಯ ಪುಟಿಯುತ್ತದೆ. ಒಮ್ಮೆ ಮಗಳಿಗೆ ಶಾಪ ಹಾಕಿ ದೂರಹೋಗಿದ್ದ ಕಂಠೀ ಜೋಯ್ಸರೂ ಮೊಮ್ಮಗನ ಬಗ್ಗೆ ಅಭಿಮಾನ ತಾಳುತ್ತಾರೆ; ಮಗಳು ಮನೆ ಕಟ್ಟುವಾಗ ಹಣ ಸಹಾಯ ಮಾಡಿ, ಹೃದಯವಂತಿಕೆ ತೋರಿಸುತ್ತಾರೆ. ಸ್ಥಾಣುವಿನಂತಿರುವ ಚನ್ನಿಗರಾಯನ ಹೊರತು, ಕಾದಂಬರಿಯ ಮುಖ್ಯ ಪಾತ್ರಗಳೆಲ್ಲವೂ ಬದುಕಿನಿಂದ ಪಾಠ ಕಲಿತು ಪಕ್ವವಾಗುತ್ತವೆ. ಜೀವನವಿಡೀ ರೂಕ್ಷ ಪ್ರವೃತ್ತಿಯಲ್ಲಿ ತೋರಿಸಿದ ಗಂಗಮ್ಮ ಕೂಡ, ಸೊಸೆ ಮರಣೋನ್ಮುಖಳಾದಾಗ ಅವಳ ಸೇವೆ ಮಾಡುತ್ತಾಳೆ. 'ಕಾಲಃ ಪಚತಿ ಭೂತಾನಿ' ಎಂಬ ಮಹಾಭಾರತದ ಮಾತು-ಇಲ್ಲಿನ ಪಾತ್ರಗಳ ವಿಕಾಸ ಮುಖೀ ಚಲನೆಯನ್ನು ಗಮನಿಸಿದಾಗ-ಸತ್ಯವೆನ್ನಿಸುತ್ತದೆ.

ಇಷ್ಟು ಹೇಳಿದ ಮೇಲೂ 'ಗೃಹಭಂಗ' ಕಾದಂಬರಿಯ ಎಲ್ಲ ಮುಖಗಳನ್ನೂ ಕುರಿತು ಹೇಳಿದಂತಾಗಿಲ್ಲವೆಂಬ ಅರಿವು ನನಗಿದೆ. ವಿಸ್ತಾರದ ಭಯದಿಂದಾಗಿ ಕಾದಂಬರಿಯಲ್ಲಿನ ಮಣ್ಣಿನ ವಾಸನೆ ಹೊಡೆಯುವ ಭಾಷೆಯ ಬಗೆಗಾಗಲೀ, ಕಂಠೀಜೋಯಿಸರು, ಕಮಲು, ಸಾತಮ್ಮ, ಗುಂಡಮ್ಮ - ಮುಂತಾದ ವ್ಯಕ್ತಿಗಳ ಭಾವ ಪ್ರಪಂಚದ ಕುರಿತಾಗಲೀ ಇಲ್ಲಿ ಪ್ರಸ್ತಾಪಿಸಿಲ್ಲ. ಕಾದಂಬರಿಯಲ್ಲಿ ಸಿನಿಮೀಯವಾಗಿ ಕಾಣಿಸಿಕೊಳ್ಳುವ ಅತಿರಂಜಿತ ಪ್ರಸಂಗಗಳೂ ಕೆಲವಿವೆ-ಎಂಬುದನ್ನು ಗಮನಿಸಿದ್ದರೂ ಅವುಗಳನ್ನು ಉಲ್ಲೇಖಿಸಿಲ್ಲ. ಈ ಬರಹ 'ಗೃಹಭಂಗ' ದ ಕೆಲವು ಮುಖಗಳನ್ನು ಮಾತ್ರ ತೋರಿಸುವ ಒಂದು ಸ್ಥೂಲ ಸಮೀಕ್ಷೆಯೇ ಹೊರತು, ವಿಮರ್ಶಾತ್ಮಕದಾದ ಸವಿವರ ಅಧ್ಯಯನವಲ್ಲವೆಂದು ಸ್ಪಷ್ಟಪಡಿಸುತ್ತೇನೆ.



# ಮೂರನೇ ಜಾವದಿ ಬಿದ್ದ ನಾಲ್ಕು ಕನಸುಗಳು

*ರಘುನಾಥ ಚ.ಹ. (ಬೆಂಗಳೂರು)*

1

ದಿಕ್ಕು ದಿಕ್ಕುಗಳಿಂದ ಉಕ್ಕುವ ಸದ್ದುಗಳುಬ್ಬರಕ್ಕೆ
ಅವಡುಗಚ್ಚುವ ಸರ್ಕಲ್ಲಿನ ದೀಪಕಂಭದ ನಟ್ಟ ನಡುವೆ
ನೆಲನಾಭಿಯಿಂದ ಚಿಗುರಿ ಮುಗಿಲಿಗೇರಲಿ ಅರಳಿ
ದಶದೆಶೆಗಳಿಂದಲೂ ಬಂದು ನೆಲೆಸಲಿ ನೂರು ನೂರು ಗಿಳಿ
ಮೊರೆದು ಕಿವಿ ತುಂಬಲಿ ಜಿಂವ್ ಜಿಂವ್ ಜಿಂವ್
ತೊಟ್ಟು ಕಳಚಿದ ಹಣ್ಣುಗಳೊಂದಿಗೆ ಹಕ್ಕಿಪಿಕ್ಕೆಗಳು
ಅರಳಿಯಡಿ ರಂಗೋಲಿಯಾಗಿ ಮೂಡಲಿ

2

ಬೆವರು ನಡುಕ ಕಾಣದ ಅನಿಮೇಷೆ
ಸುಕ್ಕಾಗದ ನೆರಿಗೆ ನಗೆಯ ಹುಡುಗಿ
ಹಾಲುಗಲ್ಲಲಿ ತಿದ್ದಿ ತೀಡಿದ ಬೆಡಗಿ
ಅವಳ ಬೊಗಸೆಕಂಗಳಿಗೆ ಹರಿದು ಬರಲಿ
ಎಲ್ಲಿಂದಲಾದರೂ ಹನಿ
ಎದೆ ಕದ ಸರಿದು
ಜೀವದ ಹಣತೆ ಉರಿಯಲಿ

3

ಜನಜಾತ್ರೆಯ ನಡುವೆ ಅಳು ಕಳಕೊಂಡ
ಒಂಟಿ ಜೀವ; ಹಾಲ್ಗುಗಲ್ಲದ ಕೂಸು
ಹುಬ್ಬು ಕುಣಿಸುತ್ತ ಸೆರಗು ಹಾರಿಸುತ್ತ
ತುಟಿತೇವ ಉಳಿಸಿಕೊಳ್ಳಲು ಹೆಣಗುವ ಹೆಂಗಸು

ಆ ಹೆಣ್ಣ ಮೊಲೆಗಳಿಗೆ ಮಗು ತುಟಿಯಿಡಲಿ
ಅವಳ ಮೊಗಕ್ಕೆ ನಾಚಿಕೆ ಮರಳಲಿ

4

ನಗರಾರಣ್ಯದ ಬೆಂಕಿ ಪೆಟ್ಟಿಗೆಗಳೊಳಗೆ
ಚಿತ್ರ ಪೆಟ್ಟಿಗೆಗಳಿಗೆ ಕೀಲಿಸಿದ ಕಣ್ಣುಗಳು
ಇರುಳು ಮುಗಿಲಿಗೆ ನೆಡಲಿ
ಮುಗಿಲ ಚುಕ್ಕಿಗಳ ಕಂಡು ಉರಿದೀಪಗಳು ನಂದಲಿ
ಇಳಿದು ಬರಲಿ ಬೆಳದಿಂಗಳು
ಎದೆಯೊಳಗೂ ಕಣ್ಣುಗಳೊಳಗೂ
ರಸ ಕಮರಿದ ಬದುಕು ಬದುಕಿನೊಳಗೂ!

## ನೆನಪುಗಳೇ ಹೀಗೆ

ಎಸ್. ಎನ್. ಸಿಂಹ (ಮೇಲುಕೋಟೆ)

ನೆನಪುಗಳೇ ಹೀಗೆ
ಜಿರಲೆಗಳ ಹಾಗೆ
ಕತ್ತಲಾದೊಡನೆ ಎಲ್ಲಿದಂಲೋ
ಸಂದು ಗೊಂದುಗಳಿಂದೆಲ್ಲ
ಸರಸರನೆ ಹರಿದು ಬರುವಂತೆ
ಕಣ್ಮುಚ್ಚಿದೊಡನೆ
ಮನದ ಮೂಲೆಯಿಂದ
ಎದೆಯ ಆಳದಿಂದ.....

ನೆನಪುಗಳೇ ಹೀಗೆ
ರಬ್ಬರು ಚೆಂಡಿನ ಹಾಗೆ
ಎಸೆದಷ್ಟೇ ಜೋರಿಂದ
ಚಿಮ್ಮಿ ಮರಳುವ ಹಾಗೆ
ತಲೆ ಕೊಡವಿದಷ್ಟೂ
ಮರಳುತ್ತವೆ ಯಾವುದೋ
ಅಜ್ಞಾತ ಗೋಡೆಗೆ ಬಡಿದು



ನೆನಪುಗಳೇ ಹೀಗೆ
ಓಯಸಿಸ್ಸಿನ ಹಾಗೆ
ಬಂಜರು ಮರಳಲ್ಲೂ
ಪಚ್ಚೆ ನಳನಳಿಸುವ ಹಾಗೆ
ಬರಡು ಬದುಕಿನಲ್ಲೂ
ಆಶೆ ಚಿಗುರೊಡೆಸುತ್ತವೆ.

ನೆನಪುಗಳೇ ಹೀಗೆ
ತಾವೂ ಸಾಯುವುದಿಲ್ಲ
ಸಾಯುಗೊಡುವುದೂ ಇಲ್ಲ!
ಅವೇನು ಬದುಕಿಗೆ ಬರೆದ
ಭಾಷ್ಯವೋ
ಇಲ್ಲ ಬರಿ ಹಿನ್ನುಡಿಯೋ?

ನೆನಪುಗಳೇ ಹೀಗೆ
ಸಂಜೀವಿನಿಯ ಹಾಗೆ!
ಅಥವಾ ಕನಿಷ್ಠ
ಊರುಗೋಲಿನ ಹಾಗೆ!

# ತುಳಿದಷ್ಟು ಬಿಸಿ ಅಂಗಾಲು

*ಕೆ. ರಾಜಲಕ್ಷ್ಮಿ ರಾವ್. (ಬೆಂಗಳೂರು)*

ಮರುಭೂಮಿಯಷ್ಟು ಭಾರದ ರಸ್ತೆ
ಒಣದಾರಿ ಬರೀ ಬೋಳು
ಸುಡುಗಾಡು ದಿಗಿಲ ಕೂಸು

ತುಳಿದಷ್ಟು ಬಿಸಿ ಅಂಗಾಲು
ಮುಗಿಲೊಡನೆ ಮಾತಾಡುವ
ಕಟ್ಟಡದ ನೆರಳಿನಡಿ ಹಬೆ ಗಾಳಿ
ತಲೆಯೊಳಗೆಲ್ಲ ಸಿಕ್ಕು ಸಿಕ್ಕು
ಅಪ್ಪ ಹೇಳುವುದು 'ಈಗಿನ ಮಕ್ಕಳೇ ಹೀಗೆ'

ನೀನಿಲ್ಲೇ ನಡೆದು ಹೋದೆ,
ಕೊಡೆಯಾಗಿ ಮಾತಾಡುವ ಮರಗಳಿದ್ದವು
ಹತ್ತು ಬೆರಳಿನಾಚೆಗೆ ಲೆಕ್ಕ ಸಾಗಿತ್ತು

ತಂಪು ಮರಗಳ ಪಕ್ಕ ಸುಗಂಧಿ ಗಿಡಗಳು
ಮುಟ್ಟಾದರೂ ಮುಟ್ಟಿಸಿಕೊಳ್ಳುವ ಹರಿಣಾಕ್ಷಿ
ಕಣ್ಣ ಮುಂದೇ ನಡೆದು ಹೋದ ಹುಡುಗನ ಸುದ್ದಿ
ಬೊಸಗೆ ತುಂಬ ಸುಗಂಧಿ
ನೀ ಹೋದ ಮೇಲೆ ಅವಳೀಗ ಹಾಗಿಲ್ಲ

ಅಗಲಗಲ ಹೆದ್ದಾರಿಯ ಯಾವ
ದಿಕ್ಕಿಗೆ ಏನು ಹೆಸರು
ಹಗಲು ಸುರಿವ ಕೆಂಡ, ಮತ್ತೆ ಕಗ್ಗತ್ತಲು
ನೀ ನಡೆದ ದಾರಿ ಹೀಗೇಕೆ ಹೇಳು?

# ಸ್ತಬ್ಧ

*ಡಿ.ಕೆ ರಮೇಶ್ (ಶಿಬ್ಬನಹಳ್ಳಿ)*

ಎದೆಗಾಳು ಹೆಕ್ಕಿ ತಿನ್ನುವ
ಹಕ್ಕಿ ಪಿಕ್ಕಿಗಳಿಗೆ
ಗೊತ್ತು

ತಲೆ ಕೊಳೆತ ಹೂಗಳಿಗೂ
ಬೇಕಾಗಿದ್ದಾಳೆ
ಒಬ್ಬಳು
ಎದೆಗಣ್ಣ ಹುಡುಗಿ

ಬೆದೆಯೆದ್ದ ಆಕಾಶಕೆ
ನೆಲವೆಂದರೆ
ಹೆಣ್ಣು
ಹೆಣ್ಣೆಂದರೆ ಕನಸು

ಕತ್ತಲ ಹಾದಿಯಲಿ ಹೊರಟ
ನೆಲಕೆ
ಬೆಳಕ ನೇಹ ಬೇಕಿಲ್ಲ. ಜೊತೆಗಿವೆ
ಹೂವ ಗುಟುಕು
ಹಕ್ಕಿಯ ಎಲೆಗಳು

ಕನಸುಗಳ ತಪ್ಪಲೆಯಲಿ ಅಗುಳು ಅನ್ನವಿಲ್ಲ
ಕತ್ತಲ ಹೊದ್ದು ಮಲಗಿದ್ದ ಮೌನ

ನೆಲ
ಮಂಚಕ್ಕೊರಗಿ ಮೈ ಚೆಲ್ಲಿದರೆ
ಆಕಾಶವೆ ವಿಟ ಪುರುಷ
ತಟ್ಟನೆ
ಎಲ್ಲ ನಿಶ್ಚಲ
ಕೋಳಿ ಕೂಗುವ ಸದ್ದು ಕೂಡ



# ಜಾಗತೀಕರಣ ಮತ್ತು ಕನ್ನಡ ಸಂಸ್ಕೃತಿ ಒಂದು ಮುಖಾಮುಖಿ

*ಬಿ. ಕೆ. ಮಾಧವರಾವ್ (ಬ್ಯಾಡಗಿ)*

**'ಕೂ**ಪ ಮಂಡೂಕ' ಎಂಬ ಶಬ್ದ ಜನಜನಿತವಾದ್ದು; ಹಾಗೆಯೇ ಸಮುದ್ರಕಪ್ಪೆ ಮತ್ತು ಬಾವಿಯ ಕಪ್ಪೆಯ ಕಥೆಯೂ ಅಷ್ಟೇ ಜನಪ್ರಿಯ. ಬಾವಿಯೇ ಜಗತ್ತೆಂದು ಭಾವಿಸಿದ ಕಪ್ಪೆಗೆ ವಿಶಾಲ ಪರಿಮಿತಿಯಿಂದ ಬಂದ ಸಮುದ್ರದ ಕಪ್ಪೆಯ ನುಡಿಗಳು ಬೊಗಳೆಯೆನಿಸದಿರದು. ಆ ಕಪ್ಪೆಯ ಜಗತ್ತಿನಷ್ಟೆ ಕಿರಿದು ಅದರ ಪರಿಜ್ಞಾನ, ತಿಳುವಳಿಕೆ ಮತ್ತು ಬಯಕೆ. ಹಾಗಾಗಿ ಬಾವಿಗೇ ರಾಜನೆಂಬ ಹಿರಿಮೆ. ಸಮುದ್ರದ ಕಪ್ಪೆಗೆ ಬೆಟ್ಟಕ್ಕೆ ಬೆಟ್ಟ ಅಡ್ಡಿಯಿರುವ ಅರಿವಿದೆ. ಜಗದ ಅಳ-ವಿಸ್ತಾರ ತಿಳಿದಿದೆ. ಆಹಾರ ಅವಕಾಶವರಸಿ ಕೂಪಕ್ಕೂ ಅದರಾಚೆಗೂ ಜಿಗಿಯುತ್ತೆ ನಾನು ಜಾಗತೀಕರಣಕ್ಕೆ ಸಂವಾದಿಯಾದಿ ಈ ಕಥೆಯನ್ನು ವಿಶ್ಲೇಸಿದೆನಷ್ಟೆ.

ಈ ಜಾಗತೀಕರಣವೆಂಬ ಶಬ್ದ Liberalisation ಗೆ ಪ್ರತಿಯಾಗಿ ಬಳಕೆಗೆ ಬಂತು. ಇದು ಮುಖ್ಯವಾಗಿ ವಾಣಿಜ್ಯಿಕ ವಿಷಯದಲ್ಲಿ ನಾವೇ ವಿಧಿಸಿದ್ದ ನಿರ್ಬಂಧಗಳನ್ನು ಹರಿದು ಹೊರಬಂದ, ಬರುತ್ತಿರುವ ಸಂದರ್ಭದಲ್ಲಿ ಛಾಲ್ತಿಗೆ ಬಂದ ವಿಷಯ. ಇತೀಚಿನ 8-10 ವರುಷದಲ್ಲಿ ತುಂಬಾ ಚರ್ಚಿತ ವಿಷಯ.

ಸಾಮಾಜಿಕ, ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ನೆಲೆಗಳಲ್ಲಿ ಈ ಜಾಗತೀಕರಣದ ಪ್ರಕಿಯೆ ನಮ್ಮ ಪೂರ್ವಜರು ತಮ್ಮ ಜೀವನವನ್ನ ಜಗತ್ತಿನ ಓಘದೊಂದಿಗೆ ಬೆರೆಸಿದಾಗ ಆರಂಭವಾಯ್ತು. ನಿರ್ವಾಣದಿಂದ -ನಿರ್ಮಾಣದವರೆಗೆ, ಕಬ್ಬಿಣದಿಂದ-ಕಂಚಿನವರೆಗೆ ಸಂಜ್ಞೆಯಿಂದ ಮಾತಿನವರೆಗೆ ವಿಸ್ತರಿಸುತ್ತಾ ಹೋಗಿ ಬೇರೆಯವರಿಗೂ ಹಂಚಿ ತಾನು ಬೆಳೆದು ಇಂದಿನ ಸ್ಥಿತಿಗೆ ಬಂದುದೂ ಒಂದು ಜಾಗತೀಕರಣ ಪ್ರಕ್ರಿಯೆ ತಾನೇ!? ಆದರೆ ಇಂದಿನ ಒಲವಿಗೂ ಅಂದಿನ ನಿಲುವಿಗೂ ಅಸೀಮ ವೆತ್ಯಾಸವಿದೆ. ಅಂದಿನದು ಅಜ್ಞಾನದಿಂದ ಅರಿವಿನೆಡೆಗೆ, ಕತ್ತಲಿನಿಂದ ಬೆಳಕಿನೆಡೆಗೆ ಭಯದಿಂದ ನಿರಾಳತೆಯೆಡೆಗೆ ಹೊರಳುವಿಕೆಯಾಗಿತ್ತು. ಆದರೆ ಇಂದಿನದು ನೈತಿಕತೆಯಿಂದ ತಳುಕಿನೆಡೆಗೆ, ಗಿಲೀಟಿನೆಡೆಗೆ, ಆಕರ್ಷಣೆಗಳೆಡೆಗೆ ಮರೀಚಿಕೆಯೆಡೆಗಿನ ಒಲುಮೆ. ಸಂತೃಪ್ತಿಯಿಂದ ದಾಹಕ್ಕೆ; ಬೇಕು ಬೇಕೆಂಬ ಬಕಾಸುರ ಬಯಕೆ ಸೃಷ್ಟಿಸುತ್ತಿದೆ. ಇಂದಿನ ಜಾಗತೀಕರಣ ಪ್ರಕ್ರಿಯೆ. ಇದು ಪಕ್ಕಾ ವಾಣಿಜ್ಯಕ-ವ್ಯವಹಾರಿಕ ಜಾಗತೀಕರಣ, ಹಾಗಾಗಿ ಮಾನವೀಯ ಮೌಲ್ಯಗಳು ಹಿಂದೆ ಸರಿದು ಧನದಾಹದ ಅಟ್ಟಹಾಸ ಎದ್ದು ಕಾಣುತ್ತಿದೆ.



ಚಂಡಮಾರುತದ ಹೊಡೆತಕ್ಕೆ ಸಿಕ್ಕು ಸಾಗರ ಕೆರೆ-ಕೊಳ್ಳಗಳನ್ನೆಲ್ಲಾ ನುಂಗಿದಂತೆ, ವ್ಯಾಪಾರೀಕರಣದ ಗಿಮಿಕ್‌ಗಳು ನಮ್ಮ ದೈನಂದಿನ ಯಾವತ್ತೂ ನಡವಳಿಕೆಯನ್ನ ಬದಲಿಸುತ್ತಿದೆ. ನಮ್ಮ ನಡವಳಿಕೆ, ಆಚರಣೆ ಸಂಪ್ರದಾಯದ ಒಟ್ಟು ಪರಿಮಾಣವೇ ಸಂಸ್ಕೃತಿ; ಹಾಗಾಗಿ ಜಾಗತೀಕರಣದ ಈಗಿನ ಪ್ರಭಾವ ಜಗತ್ತಿನ ಪ್ರತಿ ಸಮುದಾಯದ, ಸಂಸ್ಕೃತಿಯ ಮೇಲೆ ಪರಿಣಾಮ ಬೀರಿದೆ. ಜಡವೆನಿಸಿದ ಧೃಡವೆನಿಸಿದ ಕೆಲವು ಬದಲಾವಣೆಗಳೊಂದಿಗೆ ಉಳಿದಿದ್ದರೆ ಅದೆಷ್ಟೋ ಸಂಸ್ಕೃತಿಗಳು ಹೇಳ ಹೆಸರಿಲ್ಲದಂತೆ ನಾಶವಾಗಿವೆ.

ಕನ್ನಡದ ಅಕ್ಷರ, ಭಾಷೆ ಕಾಲಾಂತರದಲ್ಲಿ ಹಲವಾರು ಬದಲಾವಣೆ ಕಂಡಿದೆ. ನಡೆ-ನುಡಿಗಳು ಬದಲಾಗುತ್ತಲೇ ಬಂದಿವೆ. ಹಾಗಾಗಿ ಕನ್ನಡ ಸಂಸ್ಕೃತಿ ಎಂದು ಗುರುತಿಸುವುದು ಭಾರತೀಯ ಸಂಸ್ಕೃತಿಯೆಂದು ನಿರ್ದಿಷ್ಟವಾಗಿ ಹೇಳುವದರಷ್ಟೇ ತೊಡಕಿನದು. ನಮ್ಮ ನೆರೆಯ ಕೇರಳೀಯರಿಗೆ ಓಣಂ, ವಿಷು ಸಾರ್ವತ್ರಿಕ ಹಬ್ಬ, ಅಲ್ಲಿ ಎಲ್ಲರಿಗೂ ಒಂದೇ ನುಡಿ ಮಲಯಾಳಂ, ವಸ್ತ್ರ ದೋತಿ/ಲುಂಗಿ, ಗಂಜಿ ನೇಂದ್ರೆ ಬಾಳೆ, ಆಪಂ ಸಾಮಾನ್ಯ ಆಹಾರ. ಹಾಗೆಯೇ ತಮಿಳರಲ್ಲಿ ಪೊಂಗಲ್ ದೋತಿ, ಲಂಗದಾವಣಿ. ರಸಂ ಸಾಂಬಾರ್ ಪೊಂಗಲ್, ಇವು ಪೂರ್ವ-ಪಶ್ಚಿಮ ಉತ್ತರ-ದಕ್ಷಿಣವೆಂಬ ವೆತ್ಯಾಸವಿಲ್ಲದೆ. ಜಾತಿ ಮತದ ಭೇದವಿಲ್ಲದೆ ಸಾಮಾನ್ಯ ಅಂಶ. ಆದರೆ ಕರುನಾಡಿನ ಕಥೆ ವರ್ಣಮಯ ವೈವಿಧ್ಯ. ಕರಾವಳಿ ಕರ್ನಾಟಕ, ಉತ್ತರ ಕರ್ನಾಟಕ, ಮೈಸೂರು ಸೀಮೆಗೂ.....ಸಾಮಾನ್ಯ ಎನ್ನಬಹುದಾದ್ದು ಸ್ವಲ್ಪ ಮಟ್ಟಿಗೆ ಭಾಷೆ. ಆಹಾರ-ವಿಹಾರ ಉಡುಗೆ ತೊಡುಗೆ ಆಚರಣೆ -ನಡವಳಿಕೆ ಬೇರೆ-ಬೇರೆಯೇ. ಇದಕ್ಕೆ ಕಾರಣ ಸ್ವಾತಂತ್ರ್ಯ ಪೂರ್ವ ಇತಿಹಾಸದ ತೀರಾ ಸನಿಹದಲ್ಲೂ ನಾವೆಲ್ಲ ಒಂದೇ ಆಡಳಿತಕ್ಕೆ ಒಳಪಟ್ಟಿರಲಿಲ್ಲ. ಒಂದಾದಮೇಲೂ ಕನ್ನಡ ನಾಡು ನುಡಿಯೆಡೆಗೆ ನಮ್ಮ ಆಸ್ಥೆ ತೀರಾ ಗೌಣ. ಹಾಗಾಗಿ, ಮರಾಠರ ಕೆಳಗೆ, ಮದರಾಸಿನ ಕೆಳಗೆ ಬ್ರಿಟಿಷರ ಕೈ ಕೆಳಗೆ ಬದುಕಿ ಅವರಂತೆ ಬದುಕುವದರಲ್ಲೇ ಧನ್ಯತೆ ಕಂಡವರು. ಇಂದೂ ಅದೇ ಮನೋಭಾವ ಹೊಂದಿದ್ದೇವೆ. ನಮ್ಮ ನೆರೆ ನಾಡಿನವರಷ್ಟು ನಾವು ಸ್ವಾಭಿಮಾನಿಗಳಲ್ಲ, ಕೆಚ್ಚೂ ಇಲ್ಲ. ನಮ್ಮ ಬಗ್ಗೆ ಹೆಮ್ಮೆಯಿಲ್ಲ ಗರಿಮೆಯಿಲ್ಲ. ಇತ್ತೀಚಿನ ಸಂದರ್ಶನದಲ್ಲಿ ಶ್ರೀ ಎಸ್, ಎಲ್ ಭೈರಪ್ಪನವರು ''ನಮ್ಮದು ಗುಲಾಮಿ ಸಂಸ್ಕೃತಿ'' ಎಂದುದು ನಮಗೆ ಹೆಚ್ಚು ಸರಿಯಾಗಿದೆ. ನಾನು ಕೇರಳ ಮತ್ತು ತಮಿಳುನಾಡಿನಲ್ಲಿದ್ದು ಕಂಡುಕೊಂಡದ್ದು ಅವರ ಜಿಗುಟುತನವೆಂಬಷ್ಟು ಸ್ವಾಭಿಮಾನ, ಮಾತೃಭಾಷೆಯ ಮೇಲಿನ ಹಿಡಿತ ಆಮೂಲಕ ಜ್ಞಾನಕ್ಕಾಗಿ ಅವರ ತುಡಿತ ಹಾಗಾಗಿ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅವರ ಮೇಲುಗೈ; ವಿಶೇಷವೆಂದರೆ ಸಾಮಾಜಿಕ ಸ್ತರದಲ್ಲಿ ಮೇಲೇರಿದರೂ. ತಾಯ್ನೆಲ. ತಾಯ್ನುಡಿಯ ಮೇಲಿನ ಸೆಳೆತ ಬಿಡದಿರುವದು. ಒಬ್ಬ ವಿಶ್ವನಾಥನ್ ಆನಂದ್, ಒಬ್ಬಳು ಪಿ. ಟಿ. ಉಷಾ ಅವರ ನಾಡಿನಲ್ಲಿ ಅವರ ಭಾಷಿಗರಲ್ಲಿ ಒಂದಾಗಿ ಸೇರಿನಡೆವುದು ನೋಡಿ ಆಶ್ಚರ್ಯವಾಗದಿರದು. ಆರ್. ಕೆ ನಾರಾಯಣರ ಕೃತಿಯಲ್ಲಿ ತಮಿಳು ಮಣ್ಣಿನ ವಾಸನೆಯನ್ನೇ ಎತ್ತಿ ಹಿಡಿಯುತ್ತೆ. ಕುಮಲಾದಾಸ್ ಪ್ರಸಿದ್ಧ ಆಂಗ್ಲ ಕವಯಿತ್ರಿ ಆದರೆ ಕೇರಳದಲ್ಲಾಕೆ ಮಲಯಾಳಿಯೆ!?

ಆದರೆ ನಾವು ನಮ್ಮ ಹಿನ್ನಲೆ, ಬಗ್ಗೆ ಹೆಮ್ಮೆ ಹೊಂದಿದ್ದೇವೆಯೆ? ಕೀಳರಿಮೆಯಿಂದಾಗಿಯೇ ತಾನೆ ನಾವು ನಮ್ಮದನ್ನ ಮರೆಯಲು ಪ್ರಯತ್ನಿಸುತ್ತೇವೆ. ಅತ್ತಲೂ ಇಲ್ಲದ ಇತ್ತಲೂ ಇಲ್ಲದ ಎಡಬಿಡಂಗಿ ಆಗುತ್ತೇವೆ. ನಮ್ಮಲ್ಲಿ ಹೆಮ್ಮೆಯಿಂದ ಎದೆತಟ್ಟಿ ಹೇಳಬಹುದಾದ ಇತಿಹಾಸವಿದೆ, ಪ್ರಚಲಿತದಲ್ಲೂ ಎದೆ ತಟ್ಟಿ ಹೇಳಬಹುದಾದ ವ್ಯಕ್ತಿಗಳಿದ್ದಾರೆ, ಆದರೂ ನಮ್ಮನ್ನು ನಾವು ಕುಬ್ಜರಾಗಿಸಿಕೊಳ್ಳುವ ನಮ್ಮ

ನಾಡು ನುಡಿ, ನಡವಳಿಕೆ ಬಗೆಗೆ ಕೀಳರಿಮೆ ತೋರುವ ಪ್ರವೃತ್ತಿ ಯಾಕೆ ಬಂತೆಂಬುದೇ ನಿಗೂಢ. ಇದು ಇಂದಿನ ಜಾಗತೀಕರಣದ ಪ್ರಭಾವ ಎನ್ನುವದಕ್ಕಿಂತ ಮೊದಲೇ ಆಗಿ ಹೋಗಿದೆ.

ಇಂದಿನ ಜಾಗತೀಕರಣದ ಪ್ರಭಾವ ನಮ್ಮ ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ಗಾಢ ಪರಿಣಾಮ ಬೀರುತ್ತಿದೆ. ಇದೊಂದು ಬಲಿಷ್ಟರ ಮೇಲಾಟದ ಹುಚ್ಚು ಅಲೆ. ಇಲ್ಲಿ ಕಾಳು ಉಳಿದು ಜಳ್ಳುಹೋಗುತ್ತೆಂಬುದಕ್ಕೆ ಬೆಲೆಯಿಲ್ಲ ಇಂದು ಯಾವ ತರ್ಕಕ್ಕೂ ನೆಲೆಯಿಲ್ಲ. ಆಡಿಸುವಾತನ್ಯಾರು ಎಂಬುದರ ಮೇಲೆ ಆಟದ ಬೆಲೆ; ಆಟಗಾರನನ್ನವಲಂಬಿಸಿಯಲ್ಲ! ಹಾಗಾಗಿ ನಮ್ಮ ಹಿರಿಯರು ಸ್ವಾಧಿಸಿ ಮೆಲ್ಲುತ್ತಿದ್ದ ನಮ್ಮ ಪರಂಪರೆಯ ತಿನಿಸುಗಳು, ತಾಜಾವಾಗಿ ಬಿಸಿಯಾಗಿ ಸವಿಯುತ್ತಿದ್ದ ಭಕ್ಷ್ಯ ಭೋಜನಗಳು ಇಂದು outdated. ಇದಕ್ಕೆ ಕಾರಣ 'ಪಾರ್ಟಿಗಳೆಂಬ ಕೂಟ' ತರ-ತರಹದ ವಿದೇಶಿ ವ್ಯಂಜನಗಳು ಗಡಿ-ಬಿಡಿ ಸಂಸ್ಕೃತಿಗೆ ಅವುಗಳು ಹೊಂದಿಕೆಯಾಗುವ ಪರಿ. ಹಾಗೆಯೇ ಕುಡಿತ-ಕುಣಿತವೆಂಬುದನ್ನು ಕೀಳೆಂದು ಕಂಡ ನಮ್ಮನಾಡಲ್ಲಿಅದೊಂದು, ಸ್ತ್ರೀಪುರುಷರಾದಿಯಾಗಿ, ಪ್ರತಿಷ್ಠೆಯೆನಿಸಿದೆ.

ಕನ್ನಡದ ಮಣ್ಣಿನ ವಾಸನೆಯ ಹಾಡು ಹಸೆಗಳು ಒನಕೆ ಮೊರಗಳು, ನೇಗಿಲು ಎತ್ತುಗಳೂ ಕೂಡ ಮೂಲೆ ಸೇರ ತೊಡಗಿದಂತೆ ನಮ್ಮ ಸಂಸ್ಕೃತಿಯ ಅಂಗಾರ-ಅಕ್ಷತೆಯೆಲ್ಲಾ ಉದುರುವಂತೆ ಅನ್ನಿಸುತ್ತಿದೆ. ಉತ್ತರ ಕರ್ನಾಟಕ ಪಂಚಮಿಯ ಉಯ್ಯಾಲೆಯಿರಲಿ ದಸರೆಯ ಹುಲಿವೇಷಗಳಿರಲಿ ದಕ್ಷಿಣಕನ್ನಡದ ಧಾರ್ಮಿಕ ಆಚರಣೆ ವಿಟ್ಲಪಿಂಡಿಯ ಮೊಸರು ಕುಡಿಕೆಯಿರಲಿ ಎಲ್ಲವೂ ಸಾಂಪ್ರದಾಯಿಕತೆಯ ಕಂಪು ಕಳೆದು ಧನ್ಯತಾಭಾವ ತೊರೆದು ವಾಣಿಜ್ಯಕರಣಗೊಂಡು ಸಂಸ್ಕೃತಿಯ ಬೇರು ಹರಿದು ಕೊಂಡಿದೆ. ಯಕ್ಷಗಾನದಲ್ಲಿ ಪ್ಯಾಂಟ್‌ಸೂಟುಧಾರಿ ಪಾತ್ರ ಬಂದರೆ ಆಶ್ಚರ್ಯವಿಲ್ಲವೆಂಬಂತಾಗಿದೆ! ಇಲ್ಲಿನ ಸಾಂಪ್ರಾದಾಯಿಕ ವಾದನಗಳಾದ ಮಡಕೆ ಡಕ್ಕೆ , ತಮಟೆ, ಶಹನಾಯ್.....ಇತ್ಯಾದಿಗಳು ಮರೆಯಾಗುತ್ತಿವೆ ಇಲ್ಲವೇ ತಮ್ಮ ಮೂಲ ರೂಪ ಕಳೆದು ಪರಂಪರೆ ಸೊಗಡನ್ನೂ ಹರಿದು ನಿಂತಿದೆ.

ಒಂದು ಸಂಸ್ಕೃತಿಯ ಮೂಲ ರೂಪವನ್ನ ಸಾಂದರ್ಯವನ್ನು ಗ್ರಾಮೀಣ ಬದುಕಿನಲ್ಲಿ ಮಾತ್ರ ಕಾಣಲು ಸಾಧ್ಯ. ಆದರೆ ನಗರದ ತುಳುಕು-ಬಳುಕಿನ ಆಕರ್ಷಣೆ ಅಲ್ಲಿನ ಶ್ರೀಮಂತಿಕೆ, ಗಿಲೀಟುತನಗಳ ಅಬ್ಬರದಲ್ಲಿ ಗ್ರಾಮೀಣ ಬದುಕು ಕ್ಷಯಿಸುತ್ತಿದೆ. ನಮ್ಮ ಬಗ್ಗೆಯೇ ಅನುಮಾನ-ಅಸಹನೆ ಬೆಳೆದು 'ನಮ್ಮದು' ಎಂಬುದೆಲ್ಲವನ್ನೂ ಶಂಕಾಸ್ಪದ ದೃಷ್ಟಿಯಿಂದ ಕಾಣುತ್ತಿದ್ದೇವೆ. ಇದಕ್ಕೆ ಮುಖ್ಯ ಕಾರಣ "ವಿಜ್ಞಾನವೇ ಬದುಕು"ವೆಂದು ತಪ್ಪುವ್ಯಾಖ್ಯಾನಿಸಿ ಪ್ರಚಾರ ನೀಡಿದ್ದು ಹಾಗೂ ಜಾಗತೀಕರಣದ ಪ್ರಭುಗಳು'Hygienic, pollution, ultrapurity......" ಎಂದೆಲ್ಲಾ ಒತ್ತು ನೀಡಿ ವಿಜ್ಞಾನದ ಮುಖವಾಡ ತೊಡಿಸಿ ವ್ಯಾಪಾರ ಬೆಳಸುತ್ತಿರುವುದು. ಈ ಪ್ರಚಾರದ ಅಬ್ಬರಕ್ಕೆ ನಾವು ನಮ್ಮ ಸುತ್ತ ಭಯದ ಕೋಟೆಕಟ್ಟಿ ಬಂದಿಗಳಂತಾಗಿದ್ದೇವೆ. ಹಾಗಾಗಿ ಮನೆ-ಮದ್ದು ಮನೆಯಲ್ಲೇ ತಯಾರಿಸುತ್ತಿದ್ದ ಹಲ್ಲುಪುಡಿ ಅಷ್ಟೇಕೆ ಪ್ರಸಿದ್ದ ನಂಜನಗೂಡಿನ ಹಲ್ಲುಪುಡಿ....ಇತ್ಯಾದಿಗಳೆಲ್ಲಾ ಚರಿತ್ರೆಗೆ ಸೇರುತ್ತಿವೆ. ಜಾನಪದರ ನಡುವೆ ಪರಂಪರೆಯಾಗಿ ಬಂದ ವೈದ್ಯಪದ್ದತಿಗಳು, ಶೃಂಗಾರ ಪದ್ದತಿಗಳು, ಹಾಡು ಹಸೆಗಳು ಪೂಜೆ ಪುನಸ್ಕಾರಗಳು ಹಬ್ಬ ಹರಿದಿನಗಳು ಊಟ ಉಪಹಾರಗಳು ಕಾಣೆಯಾಗುತ್ತಿದೆ. ದಕ್ಷಿಣ ಕನ್ನಡದಲ್ಲಿ ಮನೆಗೆ ಬಂದವರಿಗೆ ಮೊದಲು ಬೆಲ್ಲನೀರು ನೀಡುವುದು ಪದ್ದತಿ. ಮಲೆನಾಡಿನಲ್ಲಿ ನಿರಂತರ

ಕಾಫಿ ಬಿಸಿಯಾಗುತ್ತಲೆ ಇತ್ತು ಆದರೆ ಬದಲಾಗಿದೆಯಿಂದು, ಬದಲಾವಣೆಯೇನು ಮರೆಯಾಗಿ ಹೋಗಿದೆಯಿದು. ಇಂದಿನ ಆಹಾರಸೇವನಾ ಕ್ರಮಕ್ಕೂ ಔಷಧ ಸೇವನೆಗೂ ವ್ಯತ್ಯಾಸವೇನಾದರೂ ಇದೆಯೇನು? ಸವಿದುಣ್ಣುವ ಅಂದಿನ ಜೀವನ ಕ್ರಮಕ್ಕೂ, ಅಂದಿನ ರಸ ನಿಮಿಷಕ್ಕೂ ಗಡಿಬಿಡಿಯ ಢೀರ್ (Instant) ಎರಗುವ ಕ್ರಮದ ಬದುಕಿಗೂ ತುಲನೆ ಮಾಡುತ್ತಾ ಹೋದರೆ ದೊಡ್ಡ ವಿಷಾದ ಗಾಥೆಯೇ ಆದೀತು.

ನನ್ನ ಕರುನಾಡಿನವರದ್ದು ಹೋರಾಟದ ಜೀವನವಲ್ಲ. ಇಲ್ಲಿನ ನೆಲ ಜಲ ಸಂಪತ್ತು ನಮ್ಮನ್ನ ಹೋರಾಟದ ಬದುಕಿಗೆ ತಯಾರಿಸಿಲ್ಲ. ನನ್ನದು ಎಂಬ ಹೆಮ್ಮೆಯೂ ಇಲ್ಲ ಒಲುಮೆಯೂ ಇಲ್ಲ. ಆಶ್ರಿತರಾಗಿ, ಅಡಿಯಾಳಾಗಿ ಬದುಕುವ ಜಾಯಮಾನದಿಂದಾಗಿ ಇಂದಿನ ಜಾಗತೀಕರಣದ ಪ್ರಕ್ರಿಯೆ ನಮ್ಮ ಸಂಸ್ಕೃತಿಯ ನೆಲಗಟ್ಟನ್ನೇ ಕೊಚ್ಚಿ ಹೋಗುವ ಭಯವಿದೆ. ನಮ್ಮ ನೆರೆಹೊರೆಯವತಂತೆ ಈ ನಾಡು ಹೊರನಾಡೆಂದೆನಿಸದೇ ತಮ್ಮ ತನ್ನವನ್ನ ಉಳಿಸಿ ಬೆಳಸಿ ಬೆರಸಿ ಒಂದಾಗಿರಲೇಬೇಕು. ಇಲ್ಲವಾದಲ್ಲಿ ನಮದು ಎಂಬ ಕುರುಹೂ ಇಲ್ಲದಂತೆ ಬೇರೆ ಏನೇನೋ ಆಗಿ ಬದುಕಬೇಕಾಗಬಹುದು!

ಈ ರೀತಿ ಬದುಕಲ್ಲಿ ಬೌದ್ಧಿಕವಾಗಿ ಭೌತಿಕವಾಗಿ ಎನೆಲ್ಲಾ ಪಡೆಯಬಹುದು. ತಳಕು ಬಳುಕಿನ ಪ್ರಭೆಯಲ್ಲಿ ಮೀಯಲೂಬಹುದು ಆದರೆ ನಮ್ಮ ಪರಂಪರೆ ಸಂಸ್ಕೃತಿಯ ಸಂಸ್ಕಾರದಲ್ಲಿದ್ದ ಶಾಂತಿ ನೆಮ್ಮದಿ, ತೃಪ್ತಿಯ ಸುಂದರ ಬದುಕು ಮಾತ್ರ ನೀಡಲಾರವು.

ವಿಶಾಲಸಾಗರದಲ್ಲಿದ್ದೂ ಕಪ್ಪೆ ಅರಸುತ್ತಲೇ ಸುತ್ತುತ್ತಿತ್ತು. ಬಾವಿ ಕಪ್ಪೆ ಕಿರಿದಾದ ಅವಕಾಶದಲ್ಲೆ ತೃಪ್ತಿಯಿಂದಿತ್ತು, ಹೆಮ್ಮೆಯಿಂದಿತ್ತು!

# ದುಡಿವ ಹುಡುಗಿಯ ದಿನಚರಿಯಿಂದ.....

ಡಿ.ಎಸ್. ರಾಮಸ್ವಾಮಿ (ಅರಸೀಕೆರೆ)

ಮೂವತ್ತೈದಕ್ಕಿನ್ನೊಂದೇ ವಸಂತ ಬಾಕಿ
ಕನ್ನಡಿಗೆ ಸುಳ್ಳು ಗೊತ್ತಿಲ್ಲವಲ್ಲ
ಕಣ್ಣ ಕೆಳಗೇ ಮೂಡಿದ ಕಪ್ಪು ಕಲೆಗಳಿಗೆಲ್ಲ
ಕೆನೆ ತಿಕ್ಕಿಕೊಳ್ಳುತ್ತ ಕಳವಳಿಸುತ್ತಾಳೆ
ನಿಟ್ಟುಸಿರು, ಎದೆತುಂಬ ಒಂಟಿ ಭಾವ!

ವರ್ಷ ವರ್ಷವೂ ಸಿಗುವ ಇಂಕ್ರಿಮೆಂಟುಗಳಲ್ಲೇ
ಆಶೆ, ಕನಸುಗಳ ರಂಗು ಅಯಸ್ಕಾಂತದ ಸೆಳೆತ?
ವಧು ಪರೀಕ್ಷೆಗೆ ಬಂದವರೊಬ್ಬರೂ ಮನೆಕೆ ಸಲ್ಲದೇ
ಮತ್ತೆ, ಮತ್ತೆ ಮುಂದೂಡುತ್ತಲೇ ಬಂದ ಅಜೆಂಡಾ
ಅಪ್ಪನ ಮರೆವಿಗೆ ಮಗಳ ಮದುವೆಯೂ ಹೊರತಲ್ಲವಲ್ಲ!

ಹರಕೆ, ಎಳ್ಳುದೀಪ, ಪ್ರದಕ್ಷಿಣೆಗಳೆಲ್ಲವೂ ಮುಗಿದು
ಮ್ಯಾಟ್ರಿಮೋನಿಯಲ್‌ನಲ್ಲಿ ನಿತ್ಯ ಹುಡುಕಾಟ
ಬ್ಯಾಂಕ್ ಬ್ಯಾಲೆನ್ಸ್, ಜಾಬ್ ಸೆಕ್ಯೂರಿಟಿಗಳ ಜತೆಗೆ
ಇನ್ನೂ ಒಂಟಿ ಉಳಿದವರ ಬಗ್ಗೆ ಗುಮಾನಿ
ಎರಡನೇ ವರ ಏಕೋ ಇಷ್ಟವಿಲ್ಲ!

ಗೌರಿ ಹಬ್ಬಕ್ಕೆ ತಪ್ಪದೇ ಎಂ.ಓ ಕಳಿಸುವ ಅಣ್ಣ
ಅಪ್ಪನಿಗೂ ಅವನಿಗೂ ತಲಾಂತರದ ವ್ಯಾಜ್ಯ
ಅವರಿಗವರ ಬದುಕೇ ಭಾರವಾಗಿರುವಾಗ
ಒಳಗೊಳಗೇ ಕಮರುತ್ತ ಚಾಚುತ್ತಿರುವ ಬೆಂಕಿಗೆ
ಸುತ್ತ ವಿದ್ಯಮಾನಗಳೆಲ್ಲ ಸುರಿವ ಆಜ್ಯ!

ಹೀಗೆ ದಿನ ಚಕ್ರ ಉರುಳಿ, ವರ್ಷ ಕಳೆಯುತ್ತಿದ್ದರೂ
ದುಡಿವ ಹುಡುಗಿಗೆ ತಕ್ಕ ಜತೆಗಾರ ಸಿಗುತ್ತಿಲ್ಲವಲ್ಲ
ಮೊದಲೆಲ್ಲ ಮದುವೆಯೆಂದರೆ ಪುಳಕಗೊಳ್ಳುತ್ತಿದ್ದವಳಿಗೆ
ಈ ನಡುವೆ ಕಾಡುತಿದೆ ಯಾವುದೋ ಕವನ
ಮನದ ಮೂಲೆಯಲ್ಲೇ ಇರುವ ಕೃಷ್ಣನದೇ ಧ್ಯಾನ?!

## ಅತ್ಯಾಚಾರದ ಕಥೆ ಹೇಳುತ್ತಿವೆ.....

ರವಿ. ಬಿ. ಎನ್. ಮೂರ್ನಾಡು (ಕೊಡಗು)

ರೆಕ್ಕೆ ಮುರಿದ ಗಾಳಿ
ಸುಕ್ಕು ಗಟ್ಟಿದ ಬೆತ್ತಲೆ ನೆಲ
ಹುಬ್ಬು ಗಂಟಿಕ್ಕಿದ ಬೆಟ್ಟದ ಸಾಲು
ಅವರು ಮಾಡಿದ ಅತ್ಯಾಚಾರದ
ಕಥೆ ಹೇಳುತ್ತಿವೆ.....!

ಅವರೆಲ್ಲರೂ ಹೋದ ಮೇಲೆ
ಬಿಟ್ಟು ಬಿಡದೆ ಸುರಿದ ಮಳೆಗೆ
ಎಂದಲೊರಸದ ಮರ-ಗಿಡ
ತುಂಬಿಕೊಂಡ ಮಣ್ಣಿನ ಗರ್ಭ
ಗಾಯಗೊಂಡ ಕಾಡು-ಮೇಡು
ಮೇಕಪ್ ಮೆತ್ತಿದ ನದಿ-ತೊರೆ-ನಾಲೆ
ನವಮಾಸ ತುಂಬುವ ಮೊದಲೇ
ಗರ್ಭಪಾತವಾದವು!

ಇರುಳನ್ನು ಸುಖಿಸಿದ ಜನ
ಹಗಲನ್ನು ಭೋಗಿಸಿದ ಹದ್ದು
ಸೂರ್ಯ-ಚಂದ್ರ-ಚಿಕ್ಕೆಯ ಲೋಕದಲ್ಲಿ
ವೃತ್ತ ಪತ್ರಿಕೆಯ ಸುದ್ದಿ!
ಆಕಾಶ-ಗಾಳಿ-ನದಿ-ಸಾಗರಗಳಿಗೆ
ವರದಿಗಾರನ ಸರದಿ!
ರಾತೋ ರಾತ್ರಿ ಮಣ್ಣಿನ ಹಾಸಿಗೆಯಲಿ
ನೋವು-ರಕ್ತ-ತುಂಡರಿಸಿದ ರುಂಡ
ನಿಸ್ತೇಜ ದೇಹಗಳ ಬೆತ್ತಲೆ ಪಯಣ!

ತಾಯಿಯ ಹೆಣದ ಮೇಲೆ ಮುಖವಿಟ್ಟವರು
ಹಾಲುಗಲ್ಲದ ಹಸುಳೆ ರಕ್ತ ಚೀಪಿದ್ದು
ಜೀವಂತ ಗೋರಿಯಾದ ಬೆತ್ತಲೆ ಕಣ್ಣುಗಳು



ನಿತ್ಯ ಕಂಪನದ ನಡುವೆ
ನಿರಂತರ ಗಂಟೆ ಬಾರಿಸಿದವರು
ಕಾಲಗರ್ಭದಲ್ಲಿ ಹಿಡಿ ಮಣ್ಣಾಗಿ ಹೋದರು!

ಭಿಕ್ಷುಕನ ವೇಷ ತೊಟ್ಟ ಶ್ರೀಮಂತ
ತಟ್ಟೆ ಕಳೆದುಕೊಂಡ ಭಿಕ್ಷುಕ!
ಅಳಿದುಳಿದ ಅಷ್ಟೊಂದು ಜನರಿಗೆ
ಹಗಲು-ರಾತ್ರಿಯ ಪಹರೆ ಕೆಲಸ
ಕಣ್ಣೀರಿಗೆ ಹರಾಜು!
ನಗುವಿಗೆ ಸರದಿಯ ನೂಕು-ನುಗ್ಗಲು!
ಉಕ್ಕಿ ಬಂದ ಹಸಿವಿನ ಪ್ರವಾಹಕ್ಕೆ
ಇಂದು-ನಾಳೆ-ನಿರಂತರ ತೇಲುವ
ಮೂಳೆ-ಮಾಂಸದ ಅಶಾಶ್ವತ ಹಂದರಗಳು!

ರೆಕ್ಕೆ ಬಿಚ್ಚದ ನಗುವಿನ ಅಲೆಗಳು
ಬಿರುಕಿಟ್ಟ ಎಳಸು ತುಟಿಗಳು
ಸೆರಗು ಸರಿದ ಎದೆಗಳು
ಗೋರಿಯಾದ ಅವರು ಎಲುಬುಗಳು
ಇತಿಹಾಸವನ್ನು ಕೈ ಬೀಸಿ ಕರೆದ
ಸಾವಿನ ನೌಕೆಯ ನಾವಿಕರು!

# ಮಳೆ ತಂದ ಭಾವಗಳು

■ ಫೇದಾರಾಣಿ, ಸೊಲಬಕ್ಕನವರ (ಹಾವೇರಿ)

ಯುದ್ಧಕ್ಕೆ ತಾಲೀಮು ನಡೆಸಿದಂತೆ
ಮೇಲೆ ಮೋಡ ಕವಿಯುತಲಿದೆ
ಇನ್ನೇನು ಮಳೆ ಹನುಕಲಿದೆ

ಶಿಶಿರ ಎಲೆ ಉದುರಿಸಿ
ವಸಂತ ಹೂ ಸುರಿಸಿ
ಮನೆಯ ಹಂಚಿನ ಮೇಲೆ
ಯಾವ ಹರಿ ಕಟ್ಟಿಸಿವೆಯೊ?
ಮಂಗ ಮೆಲ್ಲಗೆ ನೆಗೆಯದೆ
ಎಲ್ಲಿಯ ಹಂಚು ಸೀಳಿದೆಯೊ?
ಹಗಲು ಮಳೆಯಾದರೆ ಹೇಗಾದರಾದೀತು
ಇರುಳು ಮಳೆಯಾದರೆ ನಿದ್ದೆಯಾಗುವುದೇ?
ಬೇಗನೆ ಹಂಚು ಹೊದೆಸಬೇಕಿದೆ

ಹೊಸ ಮುಗುಳಿಗೆ ಕಾದವರಿಗೆ
ಸೋರುವ ಕುಳುಬಾನದ ಭಯ
ಆದರೂ ಮಳೆಯಾಗಲೇ ಬೇಕು
ಮಣ್ಣಿನ ಮನ ಬಿತ್ತಲು
ನಮ್ಮವರ ತನು ತುಂಬಲು

ಹೊರಗೆ ಎಲ್ಲೋ ಅಂಗಳದೊಳಗೆ
ಕೋಳಿಯು ಕಣ್ ತಪ್ಪಿಸಿದ ಕಾಳಿಗೆ
ಮಳೆಯ ಕನಸು ಕಣ್ಣೊಳಗೆ!
ಬೆಳೆವ ಸೊಗಸು ಮನದೊಳಗೆ!

ಗೂಟಕ್ಕೆ ಬಿಗಿದ ಎತ್ತುಗಳಿಗೆ
ಮಣ್ಣಾ ಕಂಪು ಬಡಿದಿದೆ
ಹಸಿರ ಮೆಲ್ಲುವ ಆಸೆ ಮೂಡಿಸಿದೆ!



ಅಲ್ಲಲ್ಲಿ ತಂಗಿದ್ದ ಕುರುಬರು
ಎಲ್ಲಿಗೋ ಸಾಗಬೇಕಿದೆ.
ಕೂಲಿಗೆ ಹೋಗುವ ಹೆಂಗಸರು
ಲ್ಯಾವಿ ಗಂಟೊಳಗಿನ ಹರಕು ಸೀರೆ
ತೆಗೆದು, ಪಡಕಿ ಹೊಲಿಯಬೇಕಿದೆ

ಮಳೆ ಮೋಡ ನಿರುಕಿಸುವವರು
ಹೇಗಾದರೂ ಸಾಲ ತರಬೇಕಿದೆ

ಈ ಎಲ್ಲದರ ಪರಿವಿರದವರು
ಈ ಭುವಿ, ಆ ಬಾನ ತಿಳಿಯದವರು
ಕಣ್‌ಬಿಟ್ಟು ಆಕಾಶ ನೋಡದವರು
ಕಾಲಿಂದ ಮಣ್ಣನೆಂದೂ ತುಳಿಯದವರು
ಕಾರೊಳಗೆ ಸಾಗುತ್ತಲೇ ಇರುವರು
ಅವರ ಗುರಿ ಯಾವುದೋ?!
ಅವರ ನೋಟ ಎಂಥದೋ?!
ಅವರ ಕಂಗಳಲಿ ಕಣ್ಣಿಟ್ಟು ನೋಡಿ
'ನಿಲುವ' ತಿಳಿಯಬೇಕೆಂದರೆ
ಅವರ ಕಂಗಳನು ಕಪ್ಪು ಕನ್ನಡಕ ಮುಚ್ಚಿದೆ.

ಅರೆ, ಎಲ್ಲಿ ಓಡಿದೆ ಮನಸು !
ಬೇಗ ಸಂಜೆಯಾಗಬಾರದೆ?
ಮನೆಯಲ್ಲಿ ಕಂದನೇನು ಮಾಡುತಿರುವುದೋ?
ಹೋಗಿ ತಬ್ಬಿದಾಗಲೇ ಸೊಗಸು
ಅಂಥ ಬೆಚ್ಚಗೆ ಬಿಚ್ಚಿಕೊಳ್ಳುವ ಭಾವಗಳ
ಗಳಿಗೆಗೇ, ಕಾದು ಬದುಕುವ ಮನಸು!





# 'ಮನೆಗೊಂದು ಕಲಾಕೃತಿ' ಯೋಜನೆ - ಒಂದು ಪ್ರತಿಕ್ರಿಯೆ

■ ರವಿಕುಮಾರ ಕಾಶಿ

**ಕ**ಳೆದ ತಿಂಗಳಿನಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ತನ್ನ ಸಂಗ್ರಹದಿಂದ ಸುಮಾರು ಎಂಟುನೂರು ಕೃತಿಗಳನ್ನು ಮಾರಿದ್ದರಿಂದ ರಾಜ್ಯದ ಕಲಾವಲಯದಲ್ಲಿ ಒಂದು ವಿವಾದದ ಬಿರುಗಾಳಿ ಎದ್ದಿದೆ. ಕಲಾವಿದರು ಅಕಾಡೆಮಿಯಲ್ಲಿಟ್ಟ ವಿಶ್ವಾಸವನ್ನು ಒರೆಸಿಬಿಟ್ಟ ಕಾರ್ಯಕ್ರಮದ ಬಗ್ಗೆ ಈ ಲೇಖನ.

'ಮನೆಗೊಂದು ಕಲಾಕೃತಿ' ಎಂಬ ಘೋಷಣೆಯೊಂದಿಗೆ ಅಕಾಡೆಮಿ ಕಲಾ ಪೋಷಣೆಯ, ವರ್ಧನೆಯ ತನ್ನ ಗುರುತರ ಜವಾಬ್ದಾರಿಯನ್ನು ಕೈಬಿಟ್ಟು ವಾಣಿಜ್ಯೋದ್ಯಮಿಯ ಪಾತ್ರ ತೊಟ್ಟಿದೆ. ಮಾರಾಟವಾದ ಕೃತಿಗಳಲ್ಲಿ ಜಿ.ಎಸ್. ಶೆಣೈ, ಸೂಫಿ, ಸುಬ್ರಹ್ಮಣ್ಯರಾಜು ಮುಂತಾದ ದಿವಂಗತ ಹಿರಿಯ ಕಲಾವಿದರ ಕೃತಿಗಳಷ್ಟೇ ಅಲ್ಲದೆ ಹಡಪದ್, ವಾಸುದೇವ್, ಯೂಸುಫ್, ಭಾಸ್ಕರ್‌ರಾವ್, ಜೆ.ಎಂ.ಎಸ್. ಮಣಿ, ರಮೇಶ್‌ರಾವ್ ಮುಂತಾದ ರಾಜ್ಯದ ಪ್ರಸ್ತುತ ಕಲಾವಿದರ ಕೃತಿಗಳೂ ಹಾಗೂ ಸುನಿಲ್‌ದಾಸ್, ಶಿವಾಕ್ಸ್ ಚಾವ್ಡ ಮುಂತಾದ ಇತರ ರಾಜ್ಯದ ಕಲಾವಿದರ ಕೃತಿಗಳೂ ಇದ್ದುವು. ಕೆಲವು ಕೃತಿಗಳಿಗೆ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ ಸಹ ದೊರೆತಿದ್ದುವು.

ಅಕಾಡೆಮಿ ಅಧ್ಯಕ್ಷ ಪೀಟರ್ ಲೂಯಿಸ್‌ರವರು "ಯೋಗ್ಯವಿಲ್ಲದ ಕಂಡಂ" ಕೃತಿಗಳನ್ನು ಮಾರಿದ್ದೇವೆಂದು ಒಂದು ಬಾರಿ, "ಕೇವಲ ಯುವ ಕಲಾವಿದರ ಕೃತಿಗಳಿದ್ದುವು" ಎಂದು ಮತ್ತೊಮ್ಮೆ, "ಪ್ರದರ್ಶನಕ್ಕೆ ಬಂದಿದ್ದು ವಾಪಸು ಪಡೆಯದಿದ್ದ ಕಲಾಕೃತಿಗಳು" ಎಂದು ಮಗದೊಮ್ಮೆ ಅರೆ ಸತ್ಯಗಳನ್ನು ನುಡಿದ್ದಾರೆ. ಅಲ್ಲಿ ಯುವ ಕಲಾವಿದರ ಕೃತಿಗಳಿದ್ದರೂ ಸಹ ಸೂಫಿ, ಜಿ.ಎಸ್. ಶೆಣೈ, ಪಾವಂಜೆ ಮುಂತಾದ ಹಿರಿಯರ ಅವರ ಪ್ರೌಢಿಮೆಯ ದಿನಗಳಲ್ಲಿ ರಚಿತವಾದ ಕೃತಿಗಳು ಇದ್ದುವು. ಈ ಕಲಾವಿದರು ಒಮ್ಮೆ ಯುವಕರಾಗಿದ್ದರು ಎಂಬುದೇನೋ ನಿಜ. ಅವು ಶ್ರೀಯುತರ ಯೌವನದ ಕಲಾಕೃತಿಗಳಾಗಿದ್ದರೂ ಸಹ ಅವಕ್ಕೆ ಇನ್ನೂ ಹೆಚ್ಚಿನ ಐತಿಹಾಸಿಕ ಮಹತ್ವ ಇದ್ದೇ ಇದೆ - ಈ ವಿಷಯ ಮಾನ್ಯ ಅಧ್ಯಕ್ಷರಿಗೆ ತಿಳಿಯದಲ್ಲ! ಹೆಚ್ಚಿನ ಕೃತಿಗಳು ಅಕಾಡೆಮಿಯ ಸ್ಥಿರ ಸಂಗ್ರಹದಿಂದ ಆಯ್ದ ಕೃತಿಗಳಿದ್ದುವು. ಅಧ್ಯಕ್ಷರು ಅರೆಸತ್ಯ, ಸುಳ್ಳಿನ ದೋಷವನ್ನು ಮರೆಮಾಚುವ ಕೆಲಸ ನಡೆಸಿದ್ದಾರೆ. ಈ ಯೋಜನೆಗೆ ಸಂಸ್ಕೃತಿ ಸಚಿವೆಯ ಒಪ್ಪಿಗೆ ಇತ್ತು



ಎಂಬುದವರ ಅಂಬೋಣ. ಸಚಿವೆಯವರು ಕೃತಿಗಳನ್ನು ಮಾರಬೇಕೆಂದು ಆದೇಶ ನೀಡಿದಾಗ ಅಕಾಡೆಮಿಯ ಸದಸ್ಯರು ಅದನ್ನು ತಿರಸ್ಕರಿಸಬಹುದಾಗಿತ್ತು. ಏಕೆಂದರೆ ಅಕಾಡೆಮಿ ಒಂದು ಸ್ವಾಯತ್ತ ಸಂಸ್ಥೆ. ಹಾಗೇಕೆ ಮಾಡಲಿಲ್ಲ ಎಂಬುದು ಆಶ್ಚರ್ಯದ ಸಂಗತಿ!

ಅಕಾಡೆಮಿಯ ಸ್ಥಿರ ಸಂಗ್ರಹದಲ್ಲಿದರೆ ನಾಳಿನ ಜನಾಂಗಕ್ಕೆ ತಮ್ಮ ಕೃತಿಗಳನ್ನು ನೋಡುವ ಅವಕಾಶ ಸಿಗುತ್ತದೆ ಎಂಬ ಕಾರಣಕ್ಕಾಗಿ ಕಲಾವಿದರು ಕಮ್ಮಿ ಬೆಲೆಗೆ ತಮ್ಮ ಕೃತಿಗಳನ್ನು ಮಾರಿದ್ದಾರೆ. ಈ ಮಾರಾಟ ಕಲಾವಲಯ ಅಕಾಡೆಮಿಯಲ್ಲಿಟ್ಟ ವಿಶ್ವಾಸಕ್ಕೆ ಆಘಾತ. ಅಷ್ಟೇ ಅಲ್ಲ, ಮೂರು ವರುಷಗಳಷ್ಟೇ ಇರುವ ಕಮಿಟಿ ಈ ಸಂಗ್ರಹಕ್ಕೆ Custodian (ವಾರಸುದಾರರು) ಹೊರತು ಅದರ ಮಾಲೀಕರಲ್ಲ. ಸಂಗ್ರಹವನ್ನು ಜತನವಾಗಿ ನೋಡಿಕೊಂಡು ಮುಂದಿನ ಜನಾಂಗಕ್ಕೆ ತಲುಪಿಸುವುದು ಅವರ ಜವಾಬ್ದಾರಿಯೇ ಹೊರತು ಮಾರುವ ಹಕ್ಕು ಅವರಿಗಿಲ್ಲ.

ಕೃತಿಗಳು ಕಮ್ಮಿ ಬೆಲೆಗೆ ಮಾರಾಟವಾದುವು ಎಂಬುದು ಇಲ್ಲಿ ಮುಖ್ಯವಲ್ಲ. ಅಕಾಡೆಮಿಗೆ ನಿಜಕ್ಕೂ ಹಣ ಶೇಖರಿಸುವ ಆಸೆ ಇದ್ದಿದ್ದರೆ ಕೃತಿಗಳನ್ನು ಕಲಾ ಮಾರುಕಟ್ಟೆಯಲ್ಲಿ ದೊರೆಯುವ ಬೆಲೆಗೆ ಮಾರಬೇಕಿತ್ತು. ಅಂತಹ ಸಂದರ್ಭದಲ್ಲಿ ಈಗ ದೊರೆತ ಆರೇಳು ಲಕ್ಷಕ್ಕಿಂತ ಹಲವು ಪಟ್ಟು ಹೆಚ್ಚಿನ ಹಣ ದೊರೆಯುತ್ತಿತ್ತು. ಈಗ ಕಲಾಕೃತಿಯೂ ಇಲ್ಲ, ಹಣವೂ ಇಲ್ಲದೆ ಮನೆಮನೆಗೆ ಕಲಾಕೃತಿಯೆಂಬ ಘೋಷಣೆಯ ತುಂಡುಬಟ್ಟೆ ಮಾತ್ರ ಉಳಿದಿದೆ.

ಕಲಾವಿದರನ್ನು ತೀವ್ರವಾಗಿ ಕಾಡುತ್ತಿರುವ ಮುಖ್ಯ ಕಾಳಜಿಯೆಂದರೆ ನಾಳಿನ ಜನಾಂಗ ಈ ಹಳೆ ಕಲಾಕೃತಿಗಳನ್ನು ನೋಡಬೇಕೆಂದರೆ ಎಲ್ಲಿಗೆ ಹೋಗಬೇಕು? ಮನೆ ಮನೆಗೆ ಅಲೆಯಬೇಕೆ! ಅಕಾಡೆಮಿಯ ಸಂಗ್ರಹ, ಮ್ಯೂಸಿಯಮ್‌ಗಳು ಇರುವುದೇ ಕಲಾಕೃತಿಗಳು ಸಾರ್ವಜನಿಕ ಕ್ಷೇತ್ರದಲ್ಲಿ ಎಲ್ಲರಿಗೂ ಲಭ್ಯವಾಗುವಂತಹ ಜಾಗದಲ್ಲಿ ಇರಲಿ ಎಂಬ ಸದುದ್ದೇಶದಿಂದ ಮುಂಬರುವ ಇತಿಹಾಸಕಾರರಿಗೆ, ಅಧ್ಯಯನಕಾರರಿಗೆ ಖರೀದಿ ಮಾಡಿದ ಎಲ್ಲ ಮನೆಗೂ ಹೋಗಿ ಬನ್ನಿ ಎನ್ನಬಹುದೇ! ಎಂತಹ ಹಾಸ್ಯಾಸ್ಪದ. ಹಾಗೆ ಹೇಳಲಿಕ್ಕೆ ಅಕಾಡೆಮಿಯ ಬಳಿಯಲ್ಲಿ ಮಾರಾಟವಾದ ಕೃತಿಗಳ ಹಾಗೂ ಕೊಂಡವರ ವಿಳಾಸ ಇತ್ಯಾದಿ ಪೂರ್ಣ ವಿವರಗಳ ಪಟ್ಟಿ ಇದೆಯೇ! ಅಕಾಡೆಮಿಯಲ್ಲಿ ಇಟ್ಟುಕೊಳ್ಳಲು ಜಾಗವಿಲ್ಲದಿದ್ದರೆ ಬೇರೆ ಯಾವುದಾದರೂ ಸಾರ್ವಜನಿಕ ಸಂಗ್ರಹಾಲಯಕ್ಕೆ ಅದನ್ನು ದೇಣಿಗೆ ನೀಡಬಹುದಿತ್ತು, ರಾಜ್ಯದ ಕಲಾಶಾಲೆಗಳಿಗೆ, ವಿಶ್ವವಿದ್ಯಾನಿಲಯಗಳಿಗೆ ಬಾಡಿಗೆಯಂತೆ, ಪ್ರದರ್ಶನಕ್ಕೆಂದು, ಹತ್ತಿಪ್ಪತ್ತು ವರ್ಷ ನೀಡಬಹುದಿತ್ತು. ಮತ್ತು ಅಕಾಡೆಮಿ ಅದೇ ಕಲಾವಿದರ ಕೃತಿ ಕೊಂಡುಕೊಳ್ಳುವ ಪ್ರಸಂಗ ಮುಂದೆಂದಾದರೂ ಬಂದರೆ ಈಗ ಮಾರಿದ ಬೆಲೆಗೇನೂ ದೊರೆಯುವುದಿಲ್ಲ.

ನಾನಿದನ್ನೆಲ್ಲ ಹೇಳುವಾಗ ಜನಕ್ಕೆ ಕಲಾಕೃತಿ ತಲುಪಬಾರದು ಎಂಬುದು ನನ್ನ ಧೋರಣೆಯಲ್ಲ. ಕಮ್ಮಿ ಬೆಲೆಗೆ ಎಲ್ಲರಿಗೂ ಕಲಾಕೃತಿ ದೊರೆಯುವಂತಾದರೆ ಇನ್ನೂ ಚೆನ್ನ. ಆದರೆ ಹಲವು ದಶಕಗಳು ಶ್ರಮದಿಂದ ಕಲೆ ಹಾಕಿದ ಮುಖ್ಯ ಸಂಗ್ರಹವನ್ನು ಈ ರೀತಿ ಹಂಚಿದ್ದು ತಪ್ಪು. ಅಕಾಡೆಮಿ ತನ್ನ ಸಂಗ್ರಹವನ್ನು ಮಾರಿದ್ದು ತಪ್ಪು. ಜನರನ್ನು ತಲುಪಲು ಅಗ್ಗದ ಬೆಲೆಯ ಲಿಥೋಗ್ರಾಫಿ, ಎಚ್ಚಿಂಗ್ ಇತ್ಯಾದಿಗಳ ಎಡಿಷನ್ ಮುದ್ರಿಸಿ ಮಾರಬಹುದು. ಈ ರೀತಿ ಸೃಜನಾತ್ಮಕವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಕಾಲ್ಪನಿಕ ಶಕ್ತಿಯು, ದರ್ಶನದ ಅಗತ್ಯವಿದೆ. ಈ ಯೋಜನೆ ಯಾವ ರೀತಿ ಇದೆಯೆಂದರೆ

- ಹಳೇಬೀಡು ದೇವಸ್ಥಾನದ ಹೊರಗೆ ನೂರಾರು ಶಿಲ್ಪಗಳನ್ನು ಜಾಗವಿಲ್ಲವೆಂದು ಒಂದೆಡೆ ಪೇರಿಸಿದ್ದಾರೆ. ನಾಳೆ ಪುರಾತತ್ವ ಇಲಾಖೆಯವರು ಅದನ್ನು ತಲಾ ನೂರು ನೂರು ರೂಪಾಯಿಗೆ ಒಂದರಂತೆ ಮಾರಿದರೆ ಶಿಲ್ಪಗಳನ್ನು ನೋಡಿಕೊಳ್ಳುವ ಅವರ ಜವಾಬ್ದಾರಿ ಕಳೆಯಿತು. ಆದರೆ ನಾವೆಲ್ಲ ಇತಿಹಾಸಕ್ಕೆ ವಂಚನೆ ಎಂದು ಪ್ರತಿಭಟಿಸುವುದಿಲ್ಲವೇ? ಇದೂ ಅದೇ ರೀತಿ. ಸಮಕಾಲೀನ ಕಲೆಯ ಬಗ್ಗೆ ಏಕೆ ಅಸಡ್ಡೆ. ಅದಕ್ಕೂ ಐತಿಹಾಸಿಕ ಮಹತ್ವವಿದೆ.

ಇಷ್ಟು ಹೇಳಿಯೂ ಸಹ ಈ ನಿರ್ಧಾರದ ಹಿಂದೆ ಅಕಾಡೆಮಿಯ ಆಳವನ್ನೂ ಮೀರಿದ ಶಕ್ತಿಗಳು ಕಾರ್ಯ ನಡೆಸುತ್ತಿವೆ ಎಂಬುದು ವಿದಿತ. ಆ ಹಿರಿದಾದ ಸಮಸ್ಯೆಯೊಂದಿಗೂ ನಾವು ಸೆಣಸಬೇಕು. ಅಕಾಡೆಮಿಗಳ ಪಾಲಿಸಿ, ರೂಪು ರೇಷೆ ನಿರ್ಧಾರವಾಗಿದ್ದು ನೆಹರೂರವರ ಸೋಷಿಯಲಿಸಮ್ಮಿನ ದಾರಿಯಲ್ಲಿ ಸರ್ಕಾರವೇ ಎಲ್ಲದಕ್ಕೂ ಆಸರೆಯಾಗಿದ್ದ ಸಂದರ್ಭದಲ್ಲಿ ಸರ್ಕಾರ/ಸತ್ತೆ ಕಲೆಯನ್ನು ಪೋಷಿಸುತ್ತಲೇ ಅದನ್ನು ಒಳಗಿಂದೊಳಗೇ ತನನ ಹಿಡಿತದಲ್ಲಿ ಸಹ ಇಟ್ಟುಕೊಳ್ಳುವ ಕಾರ್ಯಕ್ರಮ ಇದಾಗಿತ್ತು. ಸಾರ್ವಜನಿಕ ಕ್ಷೇತ್ರದ (Public Sector) ಉದ್ದಿಮೆ, ವಾಣಿಜ್ಯ ಎಲ್ಲವೂ ಅಲ್ಲಿಂದಲೇ ಆರಂಭವಾದದ್ದು. ಸ್ವಾತಂತ್ರ್ಯನಂತರದ ತುರ್ತಿನಲ್ಲಿ ಇದು ಅಗತ್ಯವಿತ್ತೇನೋ. ಆದರೆ ಕಳೆದ ದಶಕದಲ್ಲಿ ಎಲ್ಲೆಡೆ ಖಾಸಗೀಕರಣದ, Globalisation ಹೆದ್ದರೆ ಎದ್ದಿದೆ. ರಕ್ಷಾವಲಯ ಇತರೆ ಇನ್ನೊಂದೆರಡು ಕ್ಷೇತ್ರಗಳನ್ನು ಬಿಟ್ಟು ಇನ್ನೆಲ್ಲ ವಲಯಗಳಿಂದಲೂ ಸರ್ಕಾರ ಹಿಂದೆ ಸರಿದಿದೆ. ಈ ಉಳಿದ ಕ್ಷೇತ್ರ/ ಉದ್ದಿಮೆಗಳು ತಮ್ಮ ಸಂಪನ್ಮೂಲಗಳನ್ನು ತಾವೇ ಸೃಷ್ಟಿಸಿಕೊಂಡು ಲಾಭ/ನಷ್ಟಗಳನ್ನು ನಿಭಾಯಿಸಬೇಕೆಂಬ ಪಾಲಿಸಿ ಈಗ. ಅದಕ್ಕೆಂದೇ ಸರಕಾರೀ ಸ್ವಾಮ್ಯದಲ್ಲಿರುವ ಉದ್ದಿಮೆಗಳನ್ನು ಖಾಸಗಿ ಕ್ಷೇತ್ರದವರಿಗೆ ಮಾರಲಾಗುತ್ತಿದೆ ಅಥವಾ ಮುಚ್ಚಲಾಗುತ್ತಿದೆ. ಖಾಸಗೀಕರಣದ ತರ್ಕವನ್ನು ಸರ್ಕಾರ ಸಂಸ್ಕೃತಿ ಕ್ಷೇತ್ರದಲ್ಲಿ ಜಾರಿಗೆ ತರಲು ಹೋದಾಗ ನಮ್ಮಲ್ಲಾದ ಅನಾಹುತಗಳಾಗುತ್ತವೆ. ಸಂಸ್ಕೃತಿ ಇಲಾಖೆಯಲ್ಲಿ ಲಾಭ/ನಷ್ಟದ ಪ್ರಶ್ನೆ ಏಳುವುದಿಲ್ಲ ಎಂದು ಸರ್ಕಾರ ಅರಿಯಬೇಕು. ನಮ್ಮ ದೇಶದ ಎಲ್ಲ ಸಮಸ್ಯೆಗಳ ಮಧ್ಯೆಯೂ ಸಹ ಕಲೆ, ಸಂಸ್ಕೃತಿಗೆ ಸರ್ಕಾರದ ಬೊಕ್ಕಸದಿಂದಲೇ ಹಣ ಬರಬೇಕು. ಸಂಸ್ಕೃತಿ ಕ್ಷೇತ್ರ ಇನ್ನಿತರ ಉದ್ದಿಮೆಗಳಂತೆ ತನ್ನ ಧನ ಸಂಪನ್ಮೂಲಗಳನ್ನು ತಾನೇ ಸೃಷ್ಟಿಸಕೊಳ್ಳಬೇಕೆಂದು ಸರ್ಕಾರ ಅಪೇಕ್ಷಿಸುವುದು ತಪ್ಪು.

ಮೇನಕ ಗಾಂಧಿಯವರು ಕೇಂದ್ರ ಸಂಸ್ಕೃತಿ ಸಚಿವೆಯಾಗಿದ್ದಾಗ - ಈಗ ಕೆಲವು ತಿಂಗಳ ಹಿಂದೆ- ರಾಷ್ಟ್ರೀಯ ಆಧುನಿಕ ಕಲಾ ಗ್ಯಾಲರಿಗೆ (NGMA) ನೀಡಲು ಸರ್ಕಾರದಲ್ಲಿ ಹಣವಿಲ್ಲ. ಆದುದರಿಂದ ನಿಮ್ಮ-ಸ್ಥಿರ ಸಂಗ್ರಹದಿಂದ ಕೆಲವು ಕಲಾಕೃತಿಗಳನ್ನು ಮಾರಿಕೊಂಡು ನಿಮ್ಮ ಹಣದ ವ್ಯವಸ್ಥೆ ನೀವು ಮಾಡಿಕೊಳ್ಳಿ, ನಾನು ಮತ್ತೆ ಟ್ರೆಷರಿಗೆ ಭಿಕ್ಷಾಪಾತ್ರೆ ಹಿಡಿದು ಹೋಗುವುದಿಲ್ಲ ಎಂದು ಕಾರ್ಯಕಾರಿ ಸಮಿತಿಗೆ ಆದೇಶಿಸಿದ್ದರು. ಕಲಾವಿದರೆಲ್ಲ ಒಟ್ಟಾಗಿ ಈ ದಾರಿಯನ್ನು ಪ್ರತಿಭಟಿಸಿದಾಗ ಮಾರುವ ಯೋಜನೆ ನಿಂತುಹೋಯಿತು. ಆದರೆ ಕರ್ನಾಟಕದ ಅಕಾಡೆಮಿಗೆ ಸಂಸ್ಕೃತಿ ಸಚಿವೆಯವರು ಕಲಾಕೃತಿ ಮಾರುವಂತೆ ಆದೇಶ ನೀಡಿದಾಗ ಸದಸ್ಯರು ಅದನ್ನು ಪ್ರತಿಭಟಿಸಬೇಕಾಗಿತ್ತು. ಆ ವಿವೇಚನೆ ಇಲ್ಲದಿದ್ದುದು ಶೋಚನೀಯ.

ಯೂರೋಪ್ ಮತ್ತು ಅಮೆರಿಕಗಳಲ್ಲಿ ಅದರಲ್ಲೂ ಮುಖ್ಯವಾಗಿ ಬ್ರಿಟನ್‌ನಲ್ಲಿ ಸರ್ಕಾರ

ಖಾಸಗೀರಣದ ಧೋರಣೆಯನ್ನು ಉದ್ದಿಮೆಗೆ ಮಾತ್ರ ಸೀಮಿತಗೊಳಿಸಿ ಸಂಸ್ಕೃತಿ ಕ್ಷೇತ್ರಕ್ಕೆ ಅಪಾರ ಧನಸಹಾಯವನ್ನು ನಡೆಸಿದೆ. ಬ್ರಿಟನ್ನಿನ ಲಾಟರಿ ಹಣದಿಂದ ಸರ್ಕಾರ ಅಲ್ಲಿನ ಮ್ಯೂಸಿಯಮ್‌ಗಳಿಗೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಹಿಂದೆಂದೂ ಕೇಳಿರದಷ್ಟು ಹಣವನ್ನು ನೀಡಿದ್ದರಿಂದ ಅಲ್ಲಿನ ಚಟುವಟಿಕೆಗಳು ತೀವ್ರವಾಗಿ ನಡೆಯುತ್ತಿದೆ. ಎಲ್ಲದಕ್ಕೂ ಪಾಶ್ಚಿಮಾತ್ಯರನ್ನು ಅನುಸರಿಸಹೋಗುವ ನಾವು ಈ ರೀತಿಯ ಒಳ್ಳೆಯ ಅಂಶಗಳನ್ನೂ ಅಳವಡಿಸಿಕೊಳ್ಳಬೇಕು.

ನಾನು ಮೊದಲೇ ಹೇಳಿದಂತೆ ಕರ್ನಾಟಕ ಲಲಿತಕಲಾ ಅಕಾಡೆಮಿ ನಡೆಸಿದ ಈ ಮಾರಾಟ ಹಿರಿದಾದ ಸಮಸ್ಯೆಯೊಂದರ ಭಾಗವೆಂಬುದು ದಿಟವಾದರೂ ಇತಿಹಾಸ ಮರೆಸುವ ಇಂತಹ ಯೋಜನೆಗಳನ್ನು ಅಕಾಡೆಮಿ ನಿಲ್ಲಿಸಿ ಬದಲಾದ ನಮ್ಮ ಕಾಲಕ್ಕೆ ತಕ್ಕಂತೆ ನವೀನ ಕಾರ್ಯಕ್ರಮಗಳನ್ನು ಹಾಕಿಕೊಂಡು ತನ್ನನ್ನು ತಾನೇ ಹೊಸ ರೀತಿಯಲ್ಲಿ ಆವಿಷ್ಕರಿಸಿಕೊಳ್ಳಬೇಕು. ಈಗ ಅಕಾಡೆಮಿಗೆ ದೊರೆತಿರುವ ಹಣದಿಂದ ತನ್ನ ಬಳಿಯಲ್ಲಿ ಉಳಿದ ಕಲಾಕೃತಿಗಳನ್ನು ಸರಿಯಾದ ರೀತಿಯಲ್ಲಿ ಶೇಖರಿಸುವ ವ್ಯವಸ್ಥೆ, ಆ ಕೃತಿಗಳ ಛಾಯಾಚಿತ್ರ, ಪಾರದರ್ಶಿಕೆ ಇತ್ಯಾದಿ ತೆಗೆದಿಡುವುದು ಹಾಗೂ ಆಕರವೊಂದನ್ನು (Archive) ಬೆಳೆಸುವ ಕೆಲಸ ನಡೆಸಲಿ. ಜೊತೆಗೇ ಮಾರಾಟವಾದ ಕೃತಿಗಳ ಹಾಗೂ ಖರೀದಿಸಿದವರ ವಿವರಗಳನ್ನೊಳಗೊಂಡ ಪಟ್ಟಿಯೊಂದನ್ನು ಮುದ್ರಿಸಿ ಕಲಾವಲಯದಲ್ಲಿ ಹಂಚಿದಲ್ಲಿ ಈಗಿರುವ ಅನೇಕ ಪ್ರಶ್ನೆಗಳು ಬಗೆಹರಿಯಬಹುದು. ಸರ್ಕಾರ ಸಹ ತನ್ನ ಖಾಸಗೀಕರಣದ ಪಾಲಿಸಿಯನ್ನು ಎಲ್ಲೆಡೆ ಹರಿಬಿಡದೆ ಸಂಸ್ಕೃತಿ ಕ್ಷೇತ್ರಕ್ಕೆ ಆದಷ್ಟೂ ಧನಸಹಾಯ ಮಾಡಲಿ ಇದು ಕಲಾವಿದರ ನಿರೀಕ್ಷೆ.

●



# ಅತಿಥಿ ಕಾವ್ಯ

## ಆಸ್ತಿ

■ *ಮುದೇನೂರ ಸಂಗಣ್ಣ*

ಎನಿತೊ ಕಾಲ ಧ್ಯಾನ ಸಾಧನೆಗೈದು ಹೊಸ ಅರಿವ
ಸಾಧಿಸುತ ಬುದ್ಧತ್ವ ಪಡೆದಿಂದು ಸಿದ್ಧಾರ್ಥ
ಬಂದಿಹನು ತಂದೆ ಶುದ್ಧೋಧನನ ಅರಮನೆಗೆ,
ತಿರಿದುಂಬ 'ಭಿಕ್ಖು-ಸುತ' ಮತ್ತವನ ಬಂಧುಗಳ
ಎದುರುಗೊಂಡನು ತಂದೆ ತುಂಬು ಸಂಭ್ರಮದಿಂದ-
ಮಗನು ಮನೆಯೊಳಗುಳಿದು ನಾಡನಾಳುವನೆಂದು;
"ನೆರೆದ ಅರಮನೆಯ ಪರಿವಾರದಲಿ ಸತಿ, ಸುತರು
ಏಕೆ ಕಾಣಿಸಲಿಲ್ಲ?" ಗೊಣಗಿದರು ಬಂದವರು;
ತಾನೆ ಒಲಿದೆನ್ನ ಕೈಹಿಡಿದು ಮಗನನ್ನಿತ್ತ
ಭಿಕ್ಖು ಭಗವಂತನೇ ಬರಲಿಲ್ಲಿಗೆಂಬಾಸೆ
ಯಶೋಧರೆಗಂತೆ ! - ಇದಕೇಳಿ ಶುದ್ಧೋದನನೆ
ಕರೆದೊಯ್ದ ಕನಿಕರಿಸಿ ರಾಣೀವಾಸಕೆ ಅವನ;
ಸಮಣ ರೂಪದ ಪತಿಯ ಕಂಡೊಡನೆ ಮುನ್ನಡೆದು
ನಮಿಸಿ ಕಂಬನಿಗರೆದು ತೊಳೆಯುತಿರೆ ಪಾದಗಳ
ಅರಿಹಂತ ಧೃಡಚಿತ್ತ ಬುದ್ಧ ನಿಂತಿಹ ಸ್ತಬ್ಧ!
ಸಾಕ್ಯದೊರೆ ನಡುಗು ದನಿಯಲಿ ನುಡಿದ - "ನಿನಗೆ ನಾ
ಪಿತನೆನಲೆ! ಅಲ್ಲಲ್ಲ ಈ ಜಗದ ಕಣ್ಣೆಂಬೆ;
ಏಳು ವರ್ಷದ ಹಿಂದೆ ಸರ್ವರನು ಸರ್ವವನು
ತೊರೆದು ತಾಪಸಿಯಾಗಿ ನಡೆದೆಯಲ್ಲವೆ ನೀನು-
ಅಂದಿನಿಂದಲೆ ತನ್ನ ರಾಣಿವಾಸದ ಹೊರಗೆ
ಬಯಲ ಬರಿನೆಲದ ಮೇಲೆಯೆ ಮಲಗುತಿಹಳಯ್ಯ,
ಮಣ್ಣಿ ತಟ್ಟೆಯೊಳೂಟ ದಿನಕೆ ಮೂರೇ ತುತ್ತು!
ಚೀರವಲ್ಕಲ ವಸನೆ - ಎಲ್ಲ ತಾಪಸಿಯಂತೆ!
ಆದರೂ ಚ್ಯುತಿ ಇಲ್ಲ ನಮ್ಮ ಲಾಲನೆಯಲ್ಲಿ,
ಸಾಕ್ಯ ವಂಶದ ದೀಪ ರಾಹುಲನಿವಳ ಪ್ರಾಣ,
ಅರ್ತರಲಿ ಅನುಕಂಪ, ಸರ್ವರೊಳು ಸಮಪ್ರೀತಿ,
ನಿನ್ನ ಮಣಿಹಕೆ ಲೇಸ ಕೋರುವಳು ಹಗಲಿರುಳು-
ಎಂಥ ಪರಿಶುದ್ಧೆ ನಮ್ಮೀ ಪುತ್ರವಧುವಪ್ಪ!"
ಬುದ್ಧಮುನಿ ಇಂತೆಂದ - "ಲೇ ಸಾಯ್ತು ಓ ತಂದೆ,



ತೆರಳಿದೆನು ಬಿಟ್ಟು ನಿಮ್ಮನ್ನೆಲ್ಲ ಈ ಜಗದ
ದುಃಖ -ದಂದುಗಳಿಗೆ ನಿಜ ಕಾರಣದ ತಿಳಿದು
ಪರಿಹರಿಪ, ಸತ್ಯಮಾರ್ಗವ ತೆರೆದು ತೋರಲೆನೆ,
ತಿಳಿದು ಸಂತಸಗೊಂಡೆ ಈ ಶುಭಾಂಗಿಯ ನಿಷ್ಠೆ
ಓ ಧರ್ಮಿಷ್ಠೆ, ಲೋಕಹಿತ ನಮ್ಮ ಹಿತವೆಂದು
ಅರಿದು ನಡೆಯುತಿಹ ನಿನಗೆನ್ನ ಶರಣಾರ್ಥಿ"

* * *

ಕೆಳಗೆ ಭೋಜನ ಶಾಲೆ, ಭಿಕ್ಷು ಬಂಧುಗಳೆಲ್ಲ
ಕುಳಿತುಣ್ಣುತಿರೆ ಮಗನ ಕರೆತಂದು ಕಿಟಕಿಯೊಳು
ತೋರಿಸುತ ತಾಯಿ ಹೇಳಿದಳಿಂತು - "ಎಲೆ ತರಳ,
ನೋಡಲ್ಲಿ ಕಾಣುತಿಹ ದಿವ್ಯ ತೇಜೋ ಮೂರ್ತಿ-
ಆತನೇ ನಿನ್ನಪ್ಪ; ನಿನ್ನ ಪಾಲಿನ ಆಸ್ತಿ
ಕೇಳಿಪಡೆ ಇಂದೀಗ"; ಕರುಳ ಕುಡಿಯನು ಹೊಳೆವ
ಉಡಿಗೆ ತೊಡಿಗೆಗಳಿಂದ ಸಿಂಗರಿಸಿದಳು ಮುದದಿ;
ಮುಗಿಯಲಾರೋಗಣೆಯು ಸೇರಿಹುದು ಧರ್ಮಸಭೆ
ಸಾಕ್ಯಮುನಿ ಆರ್ಯ ಅಷ್ಟಾಂಗಗಳ ಬೋಧಿಸಿದ,
ಸತ್ಯದರಿವನ್ನಿತ್ತ; ಇನ್ನೇನು ಶರಣೆಂದು
ಹೊರಡುತಿರೆ ಬಂದು ರಾಹುಲ ನಮಿಸಿ ಹೇಳಿದನು-
"ನೀವೆನ್ನ ಹಡೆದಪ್ಪ, ಬೇಡುತಿಹೆ ಕೊಡಿರಯ್ಯ
ನನ್ನ ಪಾಲಿನ ಆಸ್ತಿ"; ಹಾಲುಗಲ್ಲದ ಹಸುಳೆ
ಇಂತು ನುಡಿದುದ ಕೇಳಿ ಬೆಚ್ಚಿದರು ಜನರೆಲ್ಲ;
ಬುದ್ಧ ಗೌತಮ ಮಾತ್ರ ನಗುಮೊಗದಿ ತಲೆಯಾಡಿ
ನುಡಿದ ಸಾರಿಪುತ್ತಗೆ, - "ಹೇಳು ಬಂಧುವೆ, ಇವಗೆ
ಕಡುಕಷ್ಟ ದುಃಖಗಳ ತರುವ ನಶ್ವರ ಆಸ್ತಿ
ಕೊಡಲುಂಟೆ ಅರಿದರಿದು ನನ್ನ ವಂಶಜನೆಂದು?"
ಮಗನ ಬೆನ್ನನು ಸವರಿ ಹೇಳಿದನು- "ವತ್ಸ, ನೀ
ಬೇಡುತಿಹ ಭೂಮಿ-ಹೇಮಗಳೊಡೆಯ ನಾನಲ್ಲ,
ಧಮ್ಮಪದದಾನಂದ ನನ್ನ ಸಂಪತ್ತಯ್ಯ,
ಇದ ಪಡೆಯೆ ಬುದ್ಧನಿಗೆ, ಧರ್ಮಕ್ಕೆ, ಸಂಘಕ್ಕೆ
ಶರಣಾಗಬೇಕು, ಗಳಿಸಿದುದ ರಕ್ಷಿಸಬೇಕು,
ಜೀವಸಕಲವನಿದಕೆ ಮುಡಿಪಿಡುವಿಯಾ ಕಂದ?"
ಮುಗ್ಧ ಬಾಲಕ ಒಪ್ಪಿ ತಲೆವಾಗಿ ನಿಲ್ಲುತಿರೆ
ಸಂಬುದ್ಧ ನೀಡಿದನು ನಾರು ವಸ್ತ್ರವನೊಂದ!



ಇದಕಂಡು ಶುದ್ಧೋಧನನು ನಿಟ್ಟುಸಿರಿಟ್ಟು
ಕಳವಳಿಸಿದನು - "ಅರಸು ಗೌತಮವಂಶ
ಇಂದು ಕೊನೆಯಾಯ್ತು! ಹಾಯ್ ಏನಗೈದೆಯೊ ಭಿಕ್ಷು,
ಆದುದಾಯಿತು, ಬೇಡುತಿಹೆ ನಾನು - ನಡೆಸಿಕೊಂಡು
ಈ ಮಾತ-ಇನ್ನಿಂತು ಎಳೆ ಹಸುಳೆಗಳಿಗೆಲ್ಲ
ದೀಕ್ಷೆ ನೀಡುವ ಮುನ್ನ ಹೆತ್ತವರ ಸಮ್ಮತಿಯ
ಪಡೆಯಯ್ಯ" ಒಪ್ಪಿ ತಲೆಬಾಗುತ್ತ ಮುನ್ನಡೆದ
ಬುದ್ಧ ಭಿಕ್ಷುಗಳೊಡನೆ ನಿಗ್ರೋಧದೆಡೆಗೆ

## ಮಹಿಮೆ

*ಡಿ. ಆರ್. ಚಂದ್ರ ಮಾಗಡಿ*

ನನ್ನೂರ
ಬೋಧಿವೃಕ್ಷದ ಕೆಳಗೆ
ಕೂತರೆ ಬುದ್ಧನಾಗುತ್ತೇನೆ,
ಹೊರಬಂದರೆ ಅವರಂತೆ
ಇವರಂತೆ ನಿಮ್ಮಂತೆ
ರಾಕ್ಷಸನಾಗುತ್ತೇನೆ.

## ಬುದ್ಧನಾಗಲು

ಕಡಿದು ಬಿದ್ದಿದ್ದ ವಿಗ್ರಹ
ದ ತಲೆಕಂಡೆ, ಅದು
ಬುದ್ಧನದೆಂದು ಅರಿತುಕೊಂಡೆ.
ಆ ಜಾಗ ಅಗೆಯುತ್ತಾ ಹೊರಟೆ,
ಆಳದಲ್ಲಿ ಮುತ್ತುರತ್ನ ವಜ್ರ
ವೈಡೂರ್ಯ ಕಂಡೆ, ಆಯ್ದು
ಸಂಚಯಿಸಿ ಕೊಂಡೆ.

# ಪುಸ್ತಕ ಪರಿಚಯ





## ಅಂಡಮಾನ್ ಕನಸು

| | | |
|---|---|---|
| ಪುಸ್ತಕದ ಹೆಸರು | : | ಅಂಡಮಾನ್ ಕನಸು |
| ಲೇಖಕ | : | ರಹಮತ್ ತರೀಕೆರೆ |
| ಮುದ್ರಣ | : | 2001 |
| ಪುಟ | : | 156 |
| ಬೆಲೆ | : | ರೂ. 60/- |
| ಪ್ರಕಾಶನ | : | ನವ ಕರ್ನಾಟಕ ಪ್ರಕಾಶನ |

ಮನುಷ್ಯನ ಅದಮ್ಯ ಕುತೂಹಲ ಹಾಗೂ ಸಾಹಸ ಪ್ರವೃತ್ತಿಗಳು ಪ್ರವಾಸಕ್ಕೆ ಸ್ಫೂರ್ತಿ ನೆಲೆಗಳು. ಎಷ್ಟೋ ವೇಳೆ ಪ್ರವಾಸ, ಪ್ರವಾಸ ಕಥಗಳು ಇತಿಹಾಸ ನಿರ್ಮಿತಿಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಹ್ಯುಯನ್ ತ್ಸಾಂಗ್, ಕೊಲಂಬಸ್, ವಾಸ್ಕೊಡಿಗಾಮ ಇವರೆಲ್ಲರ ಕಥನಗಳು ಇದಕ್ಕೆ ಸಾಕ್ಷಿಯಾಗಿವೆ.

ಇತ್ತೀಚಿನ ದಿನಗಳಲ್ಲಿ ಕನ್ನಡದಲ್ಲಿ ಪ್ರವಾಸ ಕಥನಗಳ ಪ್ರಕಟಣೆ ಹೆಚ್ಚಾಗಿವೆ. ನಿಜ, ಆದರೆ ಅವುಗಳಲ್ಲಿ ಗಟ್ಟಿ ಕಾಳುಗಳೆಷ್ಟು ಎಂಬುದು ಸಹ ಮುಖ್ಯವಾಗುತ್ತದೆ. 'ಪ್ರವಾಸ ಕಥನ' ಎಂದು ಪ್ರಕಟಗೊಳ್ಳುವ ಪುಸ್ತಕಗಳಲ್ಲಿ ಎರಡು ಬಗೆಯ ಪುಸ್ತಕಗಳನ್ನು ಕಾಣಬಹುದು. ಒಂದು ತಾನು ಕಂಡ ಸ್ಥಳದ ಭೌಗೋಳಿಕ ವಿವರಗಳಿಗೆ ಸೀಮಿತವಾದ ವರದಿ, ಇನ್ನೊಂದು ಕಂಡ ಸ್ಥಳದ ಸಾಂಸ್ಕೃತಿಕ ಬದುಕನ್ನು, ಚರಿತ್ರೆಯನ್ನು ತಿಳಿಯಲು ಪ್ರಯತ್ನಿಸುವ, ತಿಳಿದಿದ್ದನ್ನು ಹಂಚುವ ಬಗೆಯದು. ಈ ಬಗೆಯ ಕಥನಗಳ ಅವಶ್ಯಕತೆ ಹೆಚ್ಚು.

ರಹಮತ್ ತರಿಕೆರೆ ಕನ್ನಡದ ಓದುಗರಿಗೆ ಚಿರಪರಿಚಿತವಾದ ಹೆಸರು. 'ಮರದೊಳಗಣ ಕಿಚ್ಚು', 'ಕರ್ನಾಟಕದ ಸೂಫಿ ಸಂತರು', 'ಪ್ರತಿ ಸಂಸ್ಕೃತಿ' ಎಂಬಂತಹ ಗಂಭೀರ ಕೃತಿಗಳನ್ನು ನೀಡಿದ ರಹಮತ್ ತರೀಕೆರೆ 'ಅಂಡಮಾನಿನ ಕನಸು' ಕೃತಿಯ ಮೂಲಕ ತಮ್ಮ ಹೊಸದೊಂದು ಮುಖವನ್ನು ಓದುಗ ವಲಯಕ್ಕೆ ಪರಿಚಯಿಸಿದ್ದಾರೆ.

'ಅಂಡಮಾನಿನ ನೆನಪು' ತೇಜಸ್ವಿಯರ 'ಅಂಡಮಾನ್ ಮತ್ತು ನೈಲ್‌ನದಿ' ನೀಡುವ ಅನುಭವಕ್ಕಿಂತ ಭಿನ್ನವಾದುದನ್ನು ನೀಡುತ್ತದೆ. ಅಂಡಮಾನಿನ ಪ್ರಾಕೃತಿಕ ವಿವರಗಳಿಗಿಂತ ಈ ಪುಸ್ತಕದಲ್ಲಿ ಮನಸೆಳೆಯುವಂತದ್ದು ಅಲ್ಲಿಗೆ ವಲಸೆ ಹೋಗಿ ನೆಲೆ ನಿಂತ ಜನರ ಹಾಡು ಪಾಡುಗಳು, ಅವರ ನಂಬಿಕೆಗಳನ್ನು ತೋರುವ ಅವರ ಕತೆಗಳು. ಈ ಜನಾಂಗಗಳ ಜಾನಪದ ಕತೆಗಳಲ್ಲಿ ಕರೈನರ ಮಾಯದ ಬಾಚಣಿಕೆ ಕತೆ, ಬರ್ಮಾ ಜನರು ತಮ್ಮ ಮನೆಗೆ ಮೂಲ ಕಾರಣವೆಂಬಂತೆ ಹೇಳುವ ರಾಜಕುಮಾರಿಯ ಕತೆ ಕುತೂಹಲ ಹುಟ್ಟಿಸುವಂತದ್ದು.

ಅಂಡಮಾನಿನ ಮೂಲ ನಿವಾಸಿಗಳಿಗಿಂತ ಹೆಚ್ಚಾಗಿರುವ ವಲಸಿಗರ ಬದುಕನ್ನು ಬಹಳ ಸೂಕ್ಷ್ಮವಾಗಿ ಹಿಡಿದಿಟ್ಟಿದ್ದಾರೆ. ತಿಳಿಹಾಸ್ಯ ಮಿಶ್ರಿತ, ರಂಜನೀಯ ಧಾಟಿಯಲ್ಲಿ ಸಾಗುವ ಕಥನ 'ನಾಗರೀಕತೆ ಬರೆದ

ಜರಾವ ಚಿತ್ರ' 'ಕೊಡಲಿ ಯಾವುದಾದರೇನು?' ಅಧ್ಯಾಯಗಳಲ್ಲಿ ಗಂಭೀರವಾಗುತ್ತದೆ. ನಾಗರಿಕತೆ ಎಂದರೇನು? ಎಂದು ಚಿಂತಿಸುವಂತೆ ಮಾಡುತ್ತದೆ. ಈ ಕೃತಿಯ ಭಿನ್ನತೆಯಿರುವುದು ಇಲ್ಲಿಯೇ.

ಪುಸ್ತಕ ಓದಿ ಮುಗಿಸುವ ವೇಳೆಗೆ ಜರ್ಮನಿಯ ವೋಕರ್, ದೋಣಿ ನಡೆಸುತ್ತಿದ್ದ ಅಶುತೋಶ್ ಬರೂವ, ಬೆಸ್ತರ ನರಸಿಂಗವೇಲು ಇವರೆಲ್ಲ ಹಾದಿ ಬದಿಯಲ್ಲಿ ಭೇಟಿಯಾದವರಂತೆ, ಮರೆಯಲಾಗದಂತೆ ಮನಸ್ಸಿನಲ್ಲಿ ಕೂತು ಬಿಡುತ್ತಾರೆ.

ಲೇಖಕರಿಗೆ '.....ಅಂಡಮಾನ್ ಕನಸಲ್ಲಿ ಬಂದು ಕಾಡುತ್ತದೆ - ಗೆಳೆಯನಂತೆ, ಪ್ರಿಯತಮೆಯಂತೆ, ಚರಿತ್ರೆಯ ಭಾರಹೊತ್ತ ವರ್ತಮಾನದಂತೆ, ಗಾಯಗೊಂಡ ಸಂಗಾತಿಯಂತೆ, ಸಾವನ್ನು ಹಿಮ್ಮೆಟ್ಟಿಸಿ ನಿಂತ ಬಾಳಿನಂತೆ' ಓದುಗನಿಗೆ 'ಅಂಡಮಾನ್ ಕನಸು' ಮೆಲುಕು ಹಾಕಲು ಕೆಲವಿಷಯಗಳನ್ನು ಒದಗಿಸುತ್ತದೆ. ತಣ್ಣಗೆ ಕೂತು ಓದುತ್ತಿದ್ದವನಲ್ಲಿ ಕೆಲವಾದರೂ ಯೋಚನಾ ಲಹರಿಗಳನ್ನು ಎಬ್ಬಿಸುವಲ್ಲಿ ಸಫಲವಾಗಿದೆ.

❖ *ಹೇಮ ಎಸ್.*




## ಬಗೆ

| | | |
|---|---|---|
| ಪುಸ್ತಕ | : | ಬಗೆ |
| ಲೇಖಕಿ | : | ಸಬಿಹಾ ಭೂಮಿಗೌಡ |
| ಮುದ್ರಣ | : | 2001 |
| ಪುಟ | : | xii + 116 |
| ಬೆಲೆ | : | ರೂ. 60/- |
| ಪ್ರಕಾಶನ | : | ಲೋಹಿಯಾ ಪ್ರಕಾಶನ |

ಸಬಿಹಾ ಭೂಮಿಗೌಡರ 'ಬಗೆ' ಇತ್ತೀಚಿನ ಕೆಲವು ವರ್ಷಗಳಲ್ಲಿ ಅವರು ಭಾಗವಹಿಸಿದ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳ ಹಾಗೂ ಕೆಲವು ವಿಶೇಷ ಸ್ಮರಣ ಸಂಚಿಕೆಗಳಿಗಾಗಿ ಬರೆದ ಲೇಖನಗಳನ್ನು ಒಳಗೊಂಡಿರುವ ಸಂಕಲನ. ಇವು ಕೆಲವು ವಿಶಿಷ್ಟ ಸಂದರ್ಭಗಳಿಗಾಗಿಯೇ ರಚಿತವಾಗಿರುವುದರಿಂದ ಆಯಾ ಸಂದರ್ಭದ ಪ್ರಭಾವವನ್ನು ಇದರಲ್ಲಿ ಕಾಣಬಹುದಾಗಿದೆ.

ಮಹಿಳಾ ಸಾಹಿತ್ಯವನ್ನು ಕುರಿತಂತೆ ಹಲಬಗೆಯ ಚಿಂತನಾಧಾರೆಗಳು ಇತ್ತೀಚಿನ ದಿನಗಳಲ್ಲಿ ಹರಿದುಬರುತ್ತಿವೆ. ಈ ಧಾರೆಗೆ ಮಹಿಳೆಯರು ತಮ್ಮನ್ನು ಒಡ್ಡಿಕೊಳ್ಳುತ್ತಿರುವುದು ಸಂತಸದ ಸಂಗತಿ. ಮಹಿಳಾ ಸಾಹಿತ್ಯವನ್ನು ಕುರಿತಂತೆ ಮಹಿಳೆಯರೇ ಮಾತನಾಡಿದಾಗ ಹೇಗಿರುತ್ತದೆ? 'ಬಗೆ'ಯನ್ನು ಓದುವಾಗ ಇದು ಮುಖ್ಯವಾಗುತ್ತದೆ.

ಸಂಕಲನದಲ್ಲಿ ಒಟ್ಟು ಹದಿನಾಲ್ಕು ಲೇಖನಗಳಿವೆ. ಮೊದಲೆರೆಡು ಲೇಖನಗಳು ದಕ್ಷಿಣ ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ್ದಾಗಿದೆ. ಕು. ಶಿ. ಹರಿದಾಸಭಟ್ಟ ಹಾಗೂ ಮುಳಿಯ ತಿಮ್ಮಪ್ಪಯ್ಯನವರನ್ನು ಕುರಿತಾದ ಲೇಖನಗಳನ್ನು ಹೊರತು ಪಡಿಸಿದರೆ ಉಳಿದೆಲ್ಲವೂ ಮಹಿಳಾ ಸಾಹಿತ್ಯ ಚರಿತ್ರೆ ಹಾಗೂ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿವೆ.

'ಹೆಣ್ಣಿನ ಹಳಹಳಿಕೆ ಅಕ್ಷರ ದಂಗಳಕ್ಕೆ' ಲೇಖನದಲ್ಲಿ ಒಂದು ಶತಮಾನದ ದಕ್ಷಿಣ ಕನ್ನಡ ಮಹಿಳಾ ಸಾಹಿತ್ಯದ ಅವಲೋಕನವಿದೆ. ಈ ಅವಲೋಕನ ಕೇವಲ ಚಾರಿತ್ರಿಕ ಮಾಹಿತಿ ನೀಡುವಷ್ಟಕ್ಕೆ ನಿಲ್ಲುವುದಿಲ್ಲ. ಅಂದಂದಿನ ಸಾಮಾಜಿಕ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಲೇಖಕಿಯರ ಸಾಧನೆಯನ್ನು ಗುರುತಿಸುತ್ತಾರೆ. ಇದೇ ಅಂಶದ ಚರ್ಚೆಯ ಪುನರಾವರ್ತನೆ ಇಲ್ಲಿನ ಲೇಖನಗಳಲ್ಲಿ ಕಂಡುಬರುತ್ತದೆ. ಮಹಿಳಾ ಸಾಹಿತ್ಯ, ಪುರುಷ ಸಾಹಿತ್ಯ ಎಂಬುದು ಅನಿವಾರ್ಯವೇ ಎಂಬುದನ್ನು ಕುರಿತಾದ ಚರ್ಚೆ ಸಹ ಕಂಡುಬರುತ್ತದೆ.

ಲೀಲಾಬಾಯಿ ಕಾಮತ್‌ರವರನ್ನು ಕುರಿತಾದ ಲೇಖನ ಹಿಂದೆ ಮಹಿಳಾ ಸಾಹಿತಿಗಳು ಎಷ್ಟು ನಿರ್ಲಕ್ಷ್ಯಕ್ಕೆ ಒಳಗಾಗಿದ್ದರು ಎಂಬುದನ್ನು ತೋರುತ್ತದೆ. ಬದಲಾಗಿರುವ ಇಂದಿನ ಪರಿಸ್ಥಿತಿಯನ್ನು ವೈದೇಹಿ ಹಾಗೂ ಗಂಗಾ ಪಾದೇಕಲರ ಲೇಖನಗಳಲ್ಲಿ ಕಾಣಬಹುದು. ಬಾನುಮುಷ್ತಾಕ್‌ರವರ 'ಬೆಂಕಿ ಮಳೆ' ಕಥಾ ಸಂಕಲನದ ವಿಮರ್ಶಾ ಲೇಖನವೊಂದಿದೆ.

ಜನ್ನನ ಕಾವ್ಯಗಳನ್ನು ಕುರಿತಾದ ಲೇಖನ ಹಾಗೂ ಶಕುಂತಲೆಗೆ ಹೊನ್ನಶೂಲ ಎಂಬ ಲೇಖನ ಸ್ತ್ರೀವಾದಿ ಓದಿನ ಫಲಗಳು. ಮಾಸ್ತಿಯವರು 'ಹೇಮಕೂಟದಿಂದ ಬಂದ ಮೇಲೆ' ಕತೆಯಲ್ಲಿ ಶಕುಂತಲೆಯನ್ನು ಕಂಡಿರಿಸಿರುವ ರೀತಿಯನ್ನು ವೈದೇಹಿಯವರ 'ಶಕುಂತಲೆಯೊಂದಿಗೆ ಕಳೆದ ಒಂದು ಅಪರಾಹ್ನ'ದ ರೀತಿಯೊಂದಿಗೆ ಹೋಲಿಸಿ ನೋಡುತ್ತಾರೆ.

ಲೇಖಕಿಯರ ಸಾಧನೆಯನ್ನು ಗುರುತಿಸುವಾಗ ನಿರ್ಭೀಡೆಯಿಂದ ಅವರ ಮಿತಿಗಳನ್ನು ಸಹ ಹೇಳುವುದು ಸಬಿಹಾ ಭೂಮಿಗೌಡರವರಿಗೆ ಸಾಧ್ಯವಾಗಿದೆ. ವಿಷಯವನ್ನು ಮಂಡಿಸುವ ಕ್ರಮ, ಚರ್ಚೆಯನ್ನು ಬೆಳೆಸುವ ರೀತಿ ಇವು ವಿಮರ್ಶಕಿಯ ಬಗೆಗೆ ಭರವಸೆಯನ್ನು ಹುಟ್ಟಿಸುವಂತಿದೆ. ❖ *ಹೇಮ ಎಸ್.*

## ಕೃಷ್ಣಚಂದರ ಕಥೆಗಳು




| | | |
|---|---|---|
| ಪುಸ್ತಕದ ಹೆಸರು | : | ಕೃಷ್ಣಚಂದರ ಕಥೆಗಳು |
| ಅನುವಾದಕ | : | ಡಾ|| ಪಂಚಾಕ್ಷರಿ ಹಿರೇಮಠ |
| ಮುದ್ರಣ | : | 2001 |
| ಪುಟ | : | 96 |
| ಬೆಲೆ | : | ರೂ. 40/- |
| ಪ್ರಕಾಶನ | : | ನವಕರ್ನಾಟಕ ಪ್ರಕಾಶನ |

ಡಾ|| ಪಂಚಾಕ್ಷರಿ ಹಿರೇಮಠರವರು ಉರ್ದು ಸಾಹಿತಿ ಕೃಷ್ಣಚಂದರ ಎಂಟು ಸಣ್ಣಕತೆಗಳನ್ನು ಅನುವಾದಿಸಿ ಈ ಸಂಕಲನದಲ್ಲಿ ನೀಡಿದ್ದಾರೆ. ಕೃಷ್ಣಚಂದರ ಪ್ರಗತಿಶೀಲ ಸಾಹಿತ್ಯದ ಘಟ್ಟದಲ್ಲಿ ಬಂದ ಲೇಖಕ. ಕತೆ, ಕಾದಂಬರಿ, ನಾಟಕ, ಹಾಸ್ಯಬರಹಗಳ ಮೂಲಕ ಉರ್ದು ಸಾಹಿತ್ಯ ಓದುಗ ವಲಯಕ್ಕೆ ಪರಿಚಿತರು.

ಕೃಷ್ಣಚಂದರ ಕತೆಗಳಲ್ಲಿ ಪ್ರಗತಿಶೀಲ ಪಂಥದ ಹಲವು ಅಂಶಗಳನ್ನು ಕಾಣಬಹುದು. ಮಾರ್ಕ್ಸ್, ಲೆನಿನ್ ವಿಚಾರಧಾರೆಗಳು ಇವರ ಬರವಣಿಗೆಯ ಮೇಲೆ ಪ್ರಭಾವ ಬೀರಿವೆ. ಕೊಳೆತು ನಾರುತ್ತಿರುವ ವ್ಯವಸ್ಥೆಯ ಬಗೆಗಿನ ಆಕ್ರೋಶ, ಶ್ರೀಮಂತ ವರ್ಗದವರ ಬಗೆಗಿನ ಅಸಹನೆ. ಅಸಹಾಯಕರ ನೋವು ಇವುಗಳನ್ನು ಇವರ ಕತೆಗಳಲ್ಲಿ ಕಾಣಬಹುದು.

'ಮಹಾಲಕ್ಷ್ಮಿಯ ಸೇತುವೆ' ಒಣಗಲೆಂದು ಹರಡಿದ್ದ ಆರು ಸೀರೆಗಳ ಭಿತ್ತಿಯಲ್ಲಿ ಆರು ಜನ ಸಾಮಾನ್ಯ ಮಹಿಳೆಯರ ಯಾತನಾಮಯ ಬದುಕು ಅನಾವರಣಗೊಳ್ಳುವ ಕತೆ. ಬಡತನದ ಬೆಂಕಿಯಲ್ಲಿ ಈ ಹೆಣ್ಣುಗಳು ಬೇಯುತ್ತಿರುವ ಪರಿಯನ್ನು ಸೂಕ್ಷ್ಮವಾಗಿ ಚಿತ್ರಿಸಲಾಗಿದೆ.

'ಆತ ಮತ್ತೆ ಬಂದಾಗ' ಕತೆಯಲ್ಲಿ ಸತ್ತ ಗಾಂಧೀಜಿ ಮತ್ತೆ ಬಂದು ಸ್ವಾತಂತ್ರ್ಯಾನಂತರದ ಭಾರತವನ್ನು ಕಾಣುತ್ತ ಮತ್ತೊಮ್ಮೆ ಗುಂಡಿಗೆ ಬಲಿಯಾಗುತ್ತಾರೆ. ಈ ಕತೆಯಲ್ಲಿನ ವ್ಯಂಗ್ಯ ಧ್ವನಿಪೂರ್ಣವಾಗಿದೆ. 'ಮೊಹೆಂಜೋದಾರೋದ' ಕತೆ. ಸಹ ಧ್ವನಿಪೂರ್ಣವಾದದ್ದು. ಮೊಹೆಂಜೋದಾರೋದ ಬಹುದೊಡ್ಡ ಭಂಡಾರವನ್ನು ಹುಡುಕಿ ಹೊರಟವರಿಗೆ ಸಿಕ್ಕುವುದು ಚಿನ್ನದ ಪೆಟ್ಟಿಗೆಯಲ್ಲಿದ್ದ ರೊಟ್ಟಿ. ಹೊಟ್ಟೆ ತುಂಬಿದ ಆ ಪಂಡಿತರಿಗೆ ಅದರ ಸಾಂಕೇತಿಕ ಅರ್ಥವೇ ಹೊಳೆಯುವುದಿಲ್ಲ. ಕತೆಯ ಕೊನೆಯಲ್ಲಿನ ಅವರ ವರ್ತನೆ ವ್ಯವಸ್ಥೆಗೆ ಹಿಡಿದ ಕನ್ನಡಿ.

ಈ ಮೂರೂ ಸಂಕಲನದಲ್ಲಿನ ಉತ್ತಮ ಕತೆಗಳು. ಅನುವಾದ ಸಹ ಎಲ್ಲೂ ಕ್ಲಿಷ್ಟವಾಗದೆ ಕನ್ನಡದ ಜಾಯಮಾನಕ್ಕೆ ಹೊಂದಿಕೊಂಡಂತೆ ಸರಳವಾಗಿದೆ. ಹಾಗಾಗಿ ಓದುಗನಿಗೆ ಎಲ್ಲೂ ತೊಡಕುಂಟಾಗುವುದಿಲ್ಲ. ಕೃಷ್ಣಚಂದರಂತಹ ಒಳ್ಳೆಯ ಕತೆಗಾರರನ್ನು ಕನ್ನಡಕ್ಕೆ ತಂದ ಡಾ|| ಪಂಚಾಕ್ಷರಿ ಹಿರೇಮಠ ಅವರ ಪ್ರಯತ್ನ ಮೆಚ್ಚುವಂತದ್ದೆ.

## "ಅದ್ಭುತ ಯಾನ"

| | | |
|---|---|---|
| ಲೇಖಕ | : | ಪ್ರದೀಪ ಕೆಂಜಿಗೆ |
| ಮುದ್ರಣ | : | 1995 |
| ಪುಟ | : | 149 |
| ಬೆಲೆ | : | 60/- |
| ಪ್ರಕಾಶನ | : | ಪುಸ್ತಕ ಪ್ರಕಾಶನ, 91, 9ನೇ ಮೇನ್<br>ಸರಸ್ವತಿಪುರಂ, ಮೈಸೂರು-590 009 |

'ಅದ್ಭುತ ಯಾನ" ಥಾರ್‌ಹೈರ್ಡಾಲ್‌ರ ಇಂಗ್ಲಿಷ್‌ನ ಹೆಸರಾಂತ ಸಾಹಸಮಯ ಕಥೆ 'ಕೊನ್‌ಟಿಕಿ ಎಕ್ಸ್‌ಪೆಡಿಷನ್"ನ ಸಂಗ್ರಹಾನುವಾದ ಇದು. ಥಾರ್‌ಹೈರ್ಡಾಲ್‌ರ ನಿಜಜೀವನದ ಸಾಹಸದ ಅದ್ಭುತ ಕಥೆಯಾಗಿದೆ. ಥಾರ್ ಹೈರ್ಡಾಲ್‌ರನೊಳಗೊಂಡು ಆರು ಜನ ಸಾಹಸಿಗಳು, "ಫಾಲಿನೇಷಿಯನ್ನರು ದಕ್ಷಿಣ ಅಮೆರಿಕಾದಿಂದ ಬಂದ ಸೂರ್ಯವಂಶಜರು" ಎಂಬುದನ್ನು ಸಿದ್ಧಪಡಿಸಲು ಫೆಸಿಫಿಕ್ ಮಹಾಸಾಗರವನ್ನು ತೆಪ್ಪವೊಂದರ ಮೇಲೆ ಸಂಶೋಧನಾಯಾನ ಕೈಗೊಂಡ ಜೀವಂತ ಚಿತ್ರಣ. ಲೇಖಕ ಪ್ರದೀಪ ಕೆಂಜಿಗೆಯವರ ಭಾಷಾಂತರ ಮೂಲ ಅನುಭವದ ಸೌಂದರ್ಯ ಕೆಡದಂತೆ ಸುಂದರವಾಗಿ ನಿರೂಪಿಸಿದ್ದಾರೆ.

ನಾರ್ವೆ ಮೂಲದ ಥಾರ್‌ಹೈರ್ಡಾಲ್, ಫಟುಹೀವಾ ಎಂಬ ಪುಟ್ಟ ದ್ವೀಪದಲ್ಲಿ ತನ್ನ ಹೆಂಡತಿಯೊಂದಿಗಿದ್ದಾಗ ಈ ಮಹಾಯಾನದ ಮೂಲ ಎಳೆ ಚಿಗುರ ತೊಡಗುತ್ತದೆ. ಆಧುನಿಕ ಪ್ರಪಂಚದಿಂದ ದೂರವಾಗಿ, ಪಾಲಿನೇಷಿಯನ್ನರೊಂದಿಗೆ ಆ ದ್ವೀಪದಲ್ಲಿ ಕಳೆದ ದಿನಗಳಲ್ಲಿ - ಆ ಬುಡಕಟ್ಟು ಜನರ ಮೂಲದ ಬಗ್ಗೆ ಕುತೂಹಲ ಚಿಗುರತೊಡಗಿದ್ದು ಅಂದು ಹೇಳಿದ ಯೋಚನೆ ಹೆಮ್ಮರವಾಗಿ, ಕೊನೆಗೆ ಆರು ಜನ ಸ್ನೇಹಿತರನ್ನು ಕೂಡಿಕೊಂಡು ಮರದ ತೆಪ್ಪವೊಂದರಲ್ಲಿ ಆರಂಭವಾದ ಪಯಣ-ಹಲವಾರು ಏಳು ಬೀಳುಗಳೊಂದಿಗೆ, ಅಪರೂಪದ ಸಾಹಸ, ಶೋಧನೆಗಳೊಂದಿಗೆ ಮುಗಿಯುವ ರೋಮಾಂಚಕಾರಿ ಅನುಭವವನ್ನು ನಮಗೂ ಉಳಿಸುತ್ತದೆ.

*-ಎಂ. ಆರ್. ಭಗವತಿ*

## ಇನ್ನೂ ಒಂದು

ಕಾದಂಬರಿ

| | | |
|---|---|---|
| ಲೇಖಕ | : | ವಿವೇಕ ಶಾನಭಾಗ |
| ಪುಟ | : | 111 |
| ಬೆಲೆ | : | ರೂ. 50/- |

ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ) ಕರ್ನಾಟಕ




ನವ್ಯೋತ್ತರ ತಲೆಮಾರಿನ ಪ್ರಮುಖ ಕತೆಗಾರರಲ್ಲಿ ಒಬ್ಬರಾದ ವಿವೇಕ ಶಾನಭಾಗರ ಪ್ರಥಮ ಕಾದಂಬರಿ 'ಇನ್ನೂ ಒಂದು" ಕನ್ನಡಕ್ಕೆ ಕೇವಲ ಇನ್ನೂ ಒಂದು ಕಾದಂಬರಿಯ ಸೇರ್ಪಡೆ ಅಲ್ಲ, ಒಂದು ಗಮನಾರ್ಹ ಕೊಡುಗೆ ಕೂಡ. ಭೂತ ಮತ್ತು ವರ್ತಮಾನಗಳ ಮುಖಾಮುಖಿಯನ್ನು ಹಾಗೂ ವೈವಾಹಿಕ ಮತ್ತು ವಿವಾಹೇತರ ಸಂಬಂಧಗಳ ಹಿನ್ನೆಲೆಯಲ್ಲಿ ವ್ಯಕ್ತಿ-ವ್ಯಕ್ತಿಗಳ ನಂಟಿನ ತಳಮಳಗಳನ್ನು ಸೂಕ್ಷ್ಮಾವಲೋಕನಕ್ಕೆ ಒಡ್ಡುವ ಈ ಕೃತಿ ನಮ್ಮ ಸಂಸ್ಕೃತಿಯ ಮರುಚಿಂತನೆಗೆ ನಮ್ಮನ್ನು ಆಗ್ರಹಿಸುವ ಶಕ್ತಿ ಹೊಂದಿದೆ.

ಕಾದಂಬರಿ ಸ್ವಾತಿಯ ಸ್ವಾತಂತ್ರ್ಯಾಪೇಕ್ಷೆ ಮತ್ತು ಶಂಕರನ ಸೂಕ್ಷ್ಮ ಅತಿಕ್ರಮಣಶೀಲತೆಯನ್ನು ಪರಿಚಯಿಸುವ ಮೊದಲ ಅಧ್ಯಾಯ 'ಗಡಿ"ಯಿಂದ ಪ್ರಾರಂಭವಾದರೂ ಅದರ ಲವಧಾರಣೆ (thrust) ಇರುವುದು ಕಶ್ಯಪ ಕೇಂದ್ರಿತ ಘಟನಾವಳಿಗಳ ಮೇಲೆಯೇ ಆಗಿದೆ. ಉತ್ತರ ಕನ್ನಡ ಜಿಲ್ಲೆಯ ಹಳ್ಳಿಯೊಂದರಿಂದ ಮುಂಬೈಗೆ ಬಂದ ಮನೋಹರನಿಗೆ ಅಲ್ಲಿ ಭೇಟಿಯಾದ ಕಶ್ಯಪ ತನ್ನ ಬಾಲ್ಯ ಸ್ನೇಹಿತ ಕಾಶೀಶನಂತೆ ತೋರುತ್ತಾನೆ. ಇಲ್ಲಿಂದ ಕಾದಂಬರಿಯ ಮಹತ್ವದ motif ಆದ ಅನ್ವೇಷಣೆಯ ಪ್ರಕ್ರಿಯೆ ಮೊದಲಾಗುತ್ತದೆ. ಒಂದೆಡೆ, ತನ್ನ ಹಿಂದಿನ ಸಂಬಂಧದ ಎಲ್ಲ ತಂತುಗಳನ್ನು ಕಡಿದುಕೊಂಡು ಭೂತಕಾಲಕ್ಕೆ ಪೂರ್ಣ ವಿಮುಖನಾಗಿರುವ ಕಶ್ಯಪನ ನಿಗೂಢತೆಯನ್ನು ಭೇದಿಸುವಲ್ಲಿ ಮನೋಹರ ತೊಡಗುತ್ತಾನೆ. ಇನ್ನೊಂದೆಡೆ ಕಶ್ಯಪ ಗೋವಾದ ತನ್ನ ಅಜ್ಜ ಮತ್ತು ಕಾದಂಬರಿಕಾರ ನಬ್‌ಕೋವ್

ಇವರಿಂದ ಹಿಡಿದ ಹುಚ್ಚಿನಿಂದಾಗಿ ಗಂಗಾವಳಿ ನದಿಗುಂಟಸಾಗಿ ಪಶ್ಚಿಮ ಘಟ್ಟದ ಚಿಟ್ಟೆಗಳ ಅಧ್ಯಯನದ ಮೂಲಕ ಅಲ್ಲಿಯ ಜನ ಜೀವನದಲ್ಲಾದ ಪಲ್ಲಟವನ್ನು ಅನ್ವೇಷಿಸುವ ಉದ್ದೇಶ ಹೊಂದಿದ್ದಾನೆ.

ಕಶ್ಯಪ ತನ್ನ ಚರಿತ್ರೆಯನ್ನು ನಿರಾಕರಿಸಲು ಅವನು ವೇಶ್ಯೆ ಚಂಪಾಳ ಮಗನಾಗಿರುವ ಮುಜುಗರವೇ ಕಾರಣ ಎಂಬ ದಿನೂ ಅಂಕಲ್‌ನ ಮಾತನ್ನು ಕಾದಂಬರಿ ಅಲ್ಲಗಳೆಯುವುದಿಲ್ಲವಾದರೂ ಅದನ್ನು ಸ್ಪಷ್ಟವಾಗಿ ಉದ್ಘೋಷಿಸುವುದೂ ಇಲ್ಲ. ಕಾದಂಬರಿಯ ವಿನ್ಯಾಸದಲ್ಲಿ ಈ ಪ್ರಶ್ನೆ ಅಷ್ಟು ಮಹತ್ವದ್ದಲ್ಲ. "ಅವಮಾನ ಪಡಬೇಕಾದವರು ಅವರ ಜೊತೆ ಮಲಗಿದವರೇ ಹೊರತು ತನ್ನ ತಾಯಿ ಮತ್ತು ಅಕ್ಕ ಅಲ್ಲ" ಎಂಬ ಧೈರ್ಯ ತೋರಿದ್ದ ಕಾಶೀಶ ಈಗ ಕಶ್ಯಪನಾಗಿ ಪ್ರಚ್ಛನ್ನನಾದದ್ದೇಕೆ? ತನ್ನ ಭೂತಕಾಲ ತಿರಸ್ಕರಿಸಿ ಅವನು ತನ್ನ ಚರಿತ್ರೆಯನ್ನು ನಿಜವಾಗಿಯೂ ಬದಲಾಯಿಸಿದನೆ? ಇದರಿಂದ ಅವನು ಪಡೆಯುವ ಜೀವನ ದರ್ಶನ ಏನು? ಇತ್ಯಾದಿ ಪ್ರಶ್ನೆಗಳು ಇಲ್ಲಿ ಹೆಚ್ಚು ಪ್ರಸ್ತುತವಾಗಿವೆ. ಇವುಗಳಿಗಿಂತಲೂ ಮೂಲಭೂತವಾದ ಅಂದರೆ ಒಬ್ಬನ ವ್ಯಕ್ತಿತ್ವದಲ್ಲಿ ಪುನರ್ಜನ್ಮದಂಥ ಪಲ್ಲಟ ಸಾಧ್ಯವೇ? ಒಬ್ಬನ ಚರಿತ್ರೆಯನ್ನು ಅನ್ವೇಷಿಸುವುದರಿಂದ ಆಗುವ ಸಾಧನೆ ಏನು? ಪ್ರಶ್ನೆಗಳು ಸಹ ಇಲ್ಲಿವೆ.

ಕಶ್ಯಪನಿಗೆ ತೀರ ವಿರುದ್ಧಧ್ರುವದಲ್ಲಿ ಅವನ ತಮ್ಮ ಚಂದ್ರಹಾಸನಿದ್ದಾನೆ. ಚಿಟ್ಟೆಗಳ ಅಭ್ಯಾಸದ ಕಾಲ್ಪನಿಕ ಯೋಜನೆಯಲ್ಲಿ ಕಶ್ಯಪ ಹೊಸ ಚರಿತ್ರೆಯನ್ನು ಬರೆಯಬಯಸಿದ್ದಾನೆ. ಆದರೆ ಚಂದ್ರಹಾಸ ತಾನು ವೇಶ್ಯೆಯ ಮಗನೆಂಬ ಸತ್ಯವನ್ನು ಒಪ್ಪಿಕೊಂಡು ತನ್ನ ಧೈರ್ಯದಲ್ಲಿ ಚರಿತ್ರೆಯನ್ನು ನಿಜವಾಗಿಯೂ ಬದಲಾಯಿಸಬಲ್ಲವನಾಗಿ ಕಾಣುತ್ತಾನೆ. ಚರಿತ್ರೆಯನ್ನು ಬದಲಿಸುವುದು ಅದರ ತಿರಸ್ಕಾರದಲ್ಲಿಲ್ಲ, ಬದಲಾಗಿ ಅದರ ಸ್ವೀಕಾರದಲ್ಲಿದೆ ಎಂಬ ಚಂದ್ರಹಾಸನ ನಿಲುವು ಕಶ್ಯಪ ಕಾಪಾಡುವ ನಿಗೂಢತೆಯನ್ನು ಕ್ಷುಲ್ಲಕಗೊಳಿಸುವಂತಹದು. ಆಸ್ತಿ ಪಾಲುದಾರಿಕೆಯ ಕೋರ್ಟು ಪೇಪರುಗಳಿಗೆ ಕಶ್ಯಪನ ಸಹಿ ಪಡೆಯುವ ಅವನ ಯತ್ನ ಜೀವನಾಭಿಮುಖಿಯಾದದ್ದು. ಸಹಿ ಪಡೆದು ಅವನು ತನ್ನ ಕುಟುಂಬಕ್ಕೆ ತಗಲಿರುವ ಕಾಶೀಶನ ಭೂತದಿಂದ ಸಹ ಮುಕ್ತನಾಗಬಯಸುತ್ತಾನೆ. ಆದರೆ ಕಶ್ಯಪನ ಮಟ್ಟಿಗೆ ಈ ಪೇಪರುಗಳಿಗೆ ಸಹಿ ಹಾಕುವುದು ಕೂಡ ತನ್ನ ಚರಿತ್ರೆಯನ್ನು ಪುನಃ ಒಪ್ಪಿಕೊಳ್ಳುವ ಬಂಧನವೂ ಇದೆ. ಇದು ಯಶವಂತ ಚಿಕ್ಕಪ್ಪ ತನ್ನ ಮಗಳ ಮದುವೆಯಲ್ಲಿ ತನ್ನ ವೇಶ್ಯೆ ಚಂಪಾಳಿಗೂ ಸೀರೆ ಕೊಂಡಂಥ ಕ್ರಿಯೆ. ಯಶವಂತ ಅವಳಿಗೆ ಸೀರೆ ಕೊಂಡು ಭಾವನಾತ್ಮಕ ಮುಕ್ತಿ ಪಡೆದರೂ ಅವಳನ್ನು 'ಕಟ್ಟಿಕೊಳ್ಳುವ" ಬಂಧನಕ್ಕೂ ಒಳಗಾಗುತ್ತಾನೆ. ಹೀಗೆ ಕಶ್ಯಪ ಮತ್ತು ಯಶವಂತರ ಭಾವನೆಗಳ ಜಗತ್ತಿಗೆ ಚಂದ್ರಕಾಂತನ ವಾಸ್ತವ ಜಗತ್ತು ಕಾದಂಬರಿಯಲ್ಲಿ ಎದುರಾಗುತ್ತದೆ. ಇದರ ಜೊತೆಗೆ ಇಲ್ಲಿ ಸದಾ ಜಾಗೃತವಾಗಿರುವ ವೈಚಾರಿಕ ಸಂವಾದ ಸಹ ಕಾದಂಬರಿ ನೀಡುವ ಅನುಭವ ತೆಳ್ಳಗಾದಂತೆ ತಡೆಯುತ್ತದೆ. ಉದಾಹರಣೆಗೆ, ಕಶ್ಯಪ ಕಾಶೀಶನೇ ಆಗಿದ್ದಲ್ಲಿ ಅವನು ತನ್ನ ಚರಿತ್ರೆಯನ್ನು ಪುನಃ ಪ್ರತಿಷ್ಠಾಪನೆ ಮಾಡುವ ಪ್ರಯತ್ನ ಸಾರ್ಥಕವಾದದ್ದು ಎಂದು ಮನೋಹರ ಭಾವಿಸಿದರೆ, ಇದಕ್ಕೆ ಪ್ರತಿಯಾಗಿ, ಉಳಿದವರ ಬದುಕಿನಲ್ಲಿ ಕಾಶೀಶ ಈಗಾಗಲೇ ಇಲ್ಲ, ಮತ್ತು ಈ ಇಲ್ಲದಿರುವಿಕೆಯಲ್ಲಿಯೇ ಅವನ ಹೊಸ ಹುಟ್ಟು ಇದೆ, ಅಲ್ಲೇ ಬದುಕಿನ ಗಂಭೀರ ತತ್ವಗಳಿವೆ ಎಂದು ಸ್ವಾತಿ ವಾದಿಸುತ್ತಾಳೆ. ಅವಳ ದೃಷ್ಟಿಯಲ್ಲಿ ಕಶ್ಯಪನ ಪಲ್ಲಟವು ನಿಜವಾದ ಸ್ವಾತಂತ್ರ್ಯ ನೀಡುವ ಶಕ್ತಿಗೆ ಸಂಕೇತವಾಗಿದೆ.

ವಿವಾಹ ಮತ್ತು ವಿವಾಹೇತರ ಸಂಬಂಧಗಳನ್ನು ಪರಸ್ಪರ ಪರೀಕ್ಷೆಗೊಡ್ಡುವುದು ಕಾದಂಬರಿಯ ಇನ್ನೊಂದು ಮುಖ್ಯ ತಂತ್ರ. ಈ ಸಂಬಂಧ ಜಾಲವು (ಬ್ಲರ್ಬನಲ್ಲಿ ಹೇಳಿದಂತೆ) ಎಲ್ಲ ತರತಮಗಳನ್ನು, ಎಲ್ಲ ಸಿದ್ಧ-ಸ್ವೀಕೃತ ಚಿಂತನೆಗಳನ್ನು ಮೀರಿದ್ದಾಗಿದೆ. ಇಲ್ಲಿ ಸಹ, ಒಂದು ದೃಷ್ಟಿಯಿಂದ ಕಶ್ಯಪನ

ಆಯ್ಕೆ ಮತ್ತು ನಿರಾಕರಣೆಯ ಆಟವೇ ಮುಂದುವರಿಯುತ್ತದೆ. ಇಲ್ಲಿ ಸಾಂಸ್ಥಿಕ ವಿವಾಹ ಬಂಧಕ್ಕೆ ಒಳಗಾದವರೆಂದರೆ ಸ್ವಾತಿಯ ತಾಯಿ ನಿರುಪಮಾ ಮತ್ತು ಅವಳ ಗಂಡ ಹಾಗೂ ಮನೋಹರನ ಚಿಕ್ಕಪ್ಪ ಯಶವಂತ ಮತ್ತು ಯಶೋದೆ ಇವರು ಮಾತ್ರ. ವಿವಾಹದ ಮೂಲಕ "ದೇಹವನ್ನು ಹಂಚಿಕೊಂಡು ಆದಮೇಲೆ ಎಲ್ಲ ಮುಗಿಯಿತು" ಎಂಬ ವಿಧಿಗೂ ಬದ್ಧರಾದವರು. ಇದೇ ಅವರ ದಾಂಪತ್ಯದ ಅಸಫಲತೆಗೂ ಕಾರಣವಾಗುವುದೊಂದು ವಿಪರ್ಯಾಸ. ಆದರೆ ವೇಶ್ಯೆ ಚಂಪಾಳ ಜೊತೆಗಿನ ಯಶವಂತನ ಸಂಬಂಧ ಮಾನವೀಯ ನೆಲೆಯಲ್ಲಿ ಸಫಲವಾಗಿದೆ. ರೋಮಾಂಚ ಕಳೆದುಕೊಂಡು ಸ್ಥಾಯಿಯಾದ ಯಶೋದೆಯೊಂದಿಗಿನ ಅವನ ಬದುಕು ಚಂಪಾಳ ಸಾನ್ನಿಧ್ಯದಲ್ಲಿ ಪುನಃ ಪುನಃ ಚಿಗುರೊಡೆಯುತ್ತದೆ. ಇದು 'ಒಂದೆರಡು ನಿಮಿಷಗಳ ಎದುರಿನ ಕೆಲಸಕ್ಕೆ" ಮಾತ್ರ ಸೀಮಿತವಲ್ಲದ ಸಂಬಂಧ. ಮಗಳ ಮದುವೆಯಲ್ಲಿ ಯಶೋದೆಯ ಪ್ರತಿಭಟನೆಯನ್ನು ಲೆಕ್ಕಿಸದೆ ಅವನು ಚಂಪಾಳಿಗೆ ಸೀರೆ ಕೊಡ್ಡದ್ದು ಸಾಂಪ್ರದಾಯಿಕ ವಿವಾಹ ನಂಟನ್ನು ಅಣಕಿಸುವ ಒಂದು ಕ್ಷಣ. ಚಂಪಾಳಲ್ಲಿ ಅವನು ಕಾಣುವ ಹೊಸ ಸಾಧ್ಯತೆ. ಕಶ್ಯಪನು ಚಿಟ್ಟೆಗಳ ಅಧ್ಯಯನದಲ್ಲಿ ಕಾಣಲೆತ್ನಿಸುವ ಮತ್ತು ಕಾಶೀಶನ ಅಜ್ಜ ಪತಂಗಗಳ ಮತ್ತು ಅನ್ಯ ಹೆಂಗಸೊಬ್ಬಳ ಸಂಗದಲ್ಲಿ ಕಂಡಿದ್ದ ಭಾವನಾತ್ಮಕ ಸಾಧ್ಯತೆಯೇ ಆಗಿದೆ. ಇವೆಲ್ಲವೂ ಅವರು ತಮ್ಮ ತಮ್ಮ ಮಿತಿಗಳನ್ನು ಮೀರಲು ಅನುಸರಿಸಿದ ಬೇರೆ ಬೇರೆ ಮಾರ್ಗಗಳಷ್ಟೇ.

ಸ್ವಾತಿ, ಶಾಂಭವಿ, ಶಂಕರ ಇವರೆಲ್ಲ ವಿವಾಹದ ಶೃಂಖಲೆಯನ್ನು ಅನೌಪಚಾರಿಕ ಮಾನವೀಯ ಸಂಬಂಧಗಳ ಅನ್ವೇಷಣೆಯಲ್ಲಿ ಒಡೆಯಲು ಯತ್ನಿಸುತ್ತಾರೆ. ಸ್ವಾತಿಯಂತೆ ಅವಳ ಗೆಳತಿಯಾಗಿದ್ದ ಶಾಂಭವಿ ಸಹ ಸ್ವತಂತ್ರ ಮತ್ತು ಸ್ವಚ್ಛಂದ ಜೀವನದಲ್ಲಿ ನಂಬಿಗೆ ಇಟ್ಟವಳು. "ನಿನಗೆ ಬೇಕು ಅನ್ನಿಸಿದವನ ಜೊತೆ ಮಲಗು, ಮದುವೆಯ ನಿರ್ಧಾರ ತತ್‌ಕ್ಷಣದ ದೈಹಿಕ ಆಕರ್ಷಣೆಯನ್ನು ಮೀರಿದ್ದಿರಲಿ" - ಇದು ಸ್ವಾತಿಗೆ ಅವಳ ಉಪದೇಶ. ಆದರೆ ಅವಳು ಆಕರ್ಷಣೆ-ಮದುವೆ-ತಿಳುವಳಿಕೆ ಈ ಸಾಂಪ್ರದಾಯಿಕ ವಿವಾಹ ಸೂತ್ರಕ್ಕೆ ಕಟ್ಟುಬಿದ್ದು ಅಸೂಯೆ, ಆತಂಕ ಹಾಗೂ ಅಭದ್ರತೆ ಅನುಭವಿಸಿದಳು. ಮದುವೆಯಾಗಿಯೂ ಅದು ಹೇರುವ ಬಂಧನವನ್ನು ತಿರಸ್ಕರಿಸುವ ಅವಳು ಯಶೋದೆಯಂಥ ಗೃಹಿಣಿಯರ ಅಸಹಾಯಕತೆಗೆ ವಕ್ತಾರಳಂತಿದ್ದಾಳೆ. ಸ್ವಾತಿಯ ಅತಿ ಸಂವೇದನಶೀಲತೆ ಕೂಡ ಸ್ವಾತಂತ್ರ್ಯ ಮೊಟಕುಗೊಳಿಸುವ ಏನನ್ನೂ ಒಪ್ಪಲಾರದು. ತನ್ನ ಮೇಲೆ ಒಡೆತನ ಸಾಧಿಸುವ ಶಂಕರನ ಹುನ್ನಾರು, ತನ್ನ ಸುತ್ತ ಸುತ್ತುವ ಕಶ್ಯಪನ ಲೋಲಿಟಾ ಸಿಂಡ್ರೋಮ, ತನ್ನನ್ನು ಸದಾ ಅನುಮಾನದಿಂದಲೇ ನೋಡುವ ತಾಯಿ ನಿರುಪಮಾ - ಎಲ್ಲರನ್ನೂ ಅವಳು ತಿರಸ್ಕರಿಸುತ್ತಾಳೆ. ತನ್ನ ಪ್ರೇಮದ ಬಗ್ಗೆ, ಕೌಮಾರ್ಯ ಭಂಗದ ಬಗ್ಗೆ ಅವಳು ಕಟ್ಟುವ ಕತೆ ಸಹ ಬಿಡುಗಡೆಗೆ ಅವಳು ಹೂಡುವ ತಂತ್ರವೇ.

ಇಡೀ ಕಾದಂಬರಿಯ ಕ್ರಿಯೆಗೆ ಸ್ವಾತಿ ಸಾಕ್ಷಿಪ್ರಜ್ಞೆಯಾಗಿ ನಿಲ್ಲುತ್ತಾಳೆ. (ಮೇಲ್ನೋಟಕ್ಕೆ ಮನೋಹರನೇ ಹಾಗೆ ತೋರುವ ಸಾಧ್ಯತೆಯಿದೆ) ಕಾಶೀಶನೊಂದಿಗೆ ಬಾಲ್ಯದ ಸ್ನೇಹದಿಂದಾಗಿ ಕಾಶೀಶ್ ಕಶ್ಯಪನಾಗುವ ಪ್ರಕ್ರಿಯೆಯಲ್ಲಿ ಮನೋಹರ ಭಾಗಿಯಷ್ಟೇ ಅಲ್ಲ, ಅದರ ಕೇಂದ್ರವೇ ಆಗುತ್ತಾನೆ. ಆದರೆ ಸ್ವಾತಿ ಹೊರಗಿದ್ದು ನಿರ್ಲಿಪ್ತಳಾಗಿ ಇದನ್ನು ಅವಲೋಕಿಸುತ್ತಾಳೆ. ಅಲ್ಲದೆ ಕಾದಂಬರಿಯ ಉಳಿದ ಪಾತ್ರಗಳೆಲ್ಲ ಚರಿತ್ರೆಯನ್ನು ಸ್ವೀಕರಿಸುವ/ನಿರಾಕರಿಸುವ ದ್ವಂದ್ವದಲ್ಲಿ ಸುತ್ತುತ್ತಿರುವಾಗ, ಸ್ವಾತಿ ಪ್ರಸ್ತುತ ಕ್ಷಣಕ್ಕಿಂತ ಚರಿತ್ರೆ ಮಹತ್ವದ್ದೇ ಎಂಬ ಮೂಲಭೂತ ಪ್ರಶ್ನೆಯನ್ನು ಎತ್ತುತ್ತಾಳೆ. ಇದು ಇಡೀ ಕಾದಂಬರಿಯ ಧ್ವನಿಯೂ ಆಗಿದೆ. ಹಾಗೆಯೇ, "ಕಶ್ಯಪ ತಾನೇ ಇಡೀ ಎಂದು ಹೇಳಿಕೊಂಡು ಮನೋಹರ ಸ್ನೇಹಿತನಾಗಿರದಿದ್ದರೆ ಏನಾಗುತ್ತಿತ್ತು?" ಎಂಬ ಅವಳ ತುಂಟ ಪ್ರಶ್ನೆಯಲ್ಲಿ ಅವಳು ಕಶ್ಯಪನ ಚರಿತ್ರೆಯನ್ನು

ಅನಾವರಣಗೊಳಿಸುವ ಮನೋಹರನ ಅಪ್ರಸ್ತುತ ಪ್ರಯತ್ನ ಮತ್ತು ಅಹಂಕಾರವನ್ನು ವ್ಯಂಗ್ಯ ಮಾಡುತ್ತಾಳೆ. ಹೀಗೆ ಮನೋಹರನನ್ನು ಸಹ ನಾವು ಸ್ವಾತಿಯ ಪ್ರಜ್ಞೆಯ ಮೂಲಕವೇ ನೋಡಬೇಕಾಗುತ್ತದೆ. ಕೊನೆಯದಾಗಿ, ಪುಸ್ತಕ ಓದುವಾಗ ಮಹತ್ವದ ಸಾಲುಗಳ ಕೆಳಗೆ ಗೆರೆ ಎಳೆಯುವ ಬಗ್ಗೆ ಎಂದಾದರೂ ಆ ಸಾಲುಗಳನ್ನು ಸ್ಮರಿಸಿ ಅನುಭವಿಸಲು ಇದು ಸಹಾಯಕ ಕಾದಂಬರಿಯಲ್ಲಿ ವ್ಯಕ್ತಿಯನ್ನು ಅವನ ಪ್ರಮುಖ ಕ್ರಿಯೆಗಳ ಮೂಲಕ ಅರ್ಥೈಸಿಕೊಳ್ಳುವುದಕ್ಕೆ ಇದೊಂದು ರೂಪಕ. ಇಲ್ಲಿ ಪ್ರತಿಯೊಬ್ಬರೂ ಕೆಲವು ಪ್ರಮುಖ ಎಳೆಹಿಡಿದು ಪರಕಾಯ ಪ್ರವೇಶ ಮಾಡುತ್ತಿದ್ದಾರೆ. ಆದರೆ ಈ ಕ್ರಿಯೆಯ ಪೂರ್ಣ ಅರಿವು ಇರುವುದು ಸ್ವಾತಿಗೆ ಮಾತ್ರ.

ವಿವೇಕರ ಕಶ್ಯಪ, ಚಿತ್ತಾಲರ ಕಾದಂಬರಿ 'ಶಿಕಾರಿ''ಯ ನಾಗಪ್ಪನನ್ನು ವೈರುಧ್ಯದಲ್ಲಿ ನೆನಪಿಸುತ್ತಾನೆ. ನಾಗಪ್ಪನಿಗೆ ತನ್ನ ಭೂತಕಾಲದ ಬಗ್ಗೆ ತಿಳಿಯದ ಸಂಗತಿಗಳು ಹಲವು. ತಿಳಿದ ಸಂಗತಿಯನ್ನು ಸಹ ಅರ್ಥಮಾಡಿಕೊಳ್ಳಲು ಅವನಿಗೆ ಆಗುವುದಿಲ್ಲ. ತನ್ನ ಬಾಲ್ಯದೊಂದಿಗೆ ಮುಖಾಮುಖಿ ಅವನಿಗೆ ಅಸಾಧ್ಯವಷ್ಟೇ ಅಲ್ಲ, ಭಯಾನಕ ಕೂಡ. ಆದರೆ ಕೊನೆಯಲ್ಲಿ, ತಾನು ಕಂಡಿರದ ಅಣ್ಣನನ್ನು, ಕಾಣೆಯಾದ ತಂಗಿಯನ್ನು ಹುಡುಕುವ ಅವನ ನಿರ್ಧಾರ ಹೇಡಿ ನಾಗಪ್ಪ ಸತ್ತು ಹೊಸ ನಾಗಪ್ಪ ಉದಯಿಸುವುದನ್ನು ಸೂಚಿಸುತ್ತದೆ. ಯಾವುದೋ ಒಂದು ಕ್ಷಣದಲ್ಲಿ ತನ್ನ ಪರಿಮಿತಿಗಳನ್ನು ಮೀರುವ ಮತ್ತು ಹೊಸ ವಾಸ್ತವವನ್ನು ಸ್ವೀಕರಿಸಿ ಹೊಸ ವ್ಯಕ್ತಿಯಾಗುವ ಈ ಧೈರ್ಯ ಅಸ್ತಿತ್ವವಾದಿ (existentialist) ನೆಲೆಯದು. ಆದರೆ ಕಶ್ಯಪ ಇಂಥ ಧೈರ್ಯ ತೋರುವುದಿಲ್ಲ. ಚಿಟ್ಟೆಗಳ ಮೂಲಕ ಜನಜೀವನ ಅಧ್ಯಯನ ಅವನ ಮಟ್ಟಿಗೆ ಆತ್ಮಾನ್ವೇಷಣೆಯಾದರೂ ಒಂದು ಭ್ರಾಮಕ, ಪಲಾಯನವಾದಿ ಕ್ರಿಯೆಯೇ ಅನ್ನಿಸುತ್ತದೆ.

ಈ ಕಾದಂಬರಿಯಲ್ಲಿ ದೋಷಗಳಿಲ್ಲವೆಂದಲ್ಲ 'ಋಣಾನುಬಂಧ'' ಎಂಬ ಅಧ್ಯಾಯದ ಕೊನೆಯಲ್ಲಿ ಕಾಶೀಶನು ಮನೆ ಬಿಟ್ಟು ಮೀನಿನ ಟ್ರಕ್ ಏರಿ ಮುಂಬೈಗೆ ಹೋದ ಯಾತ್ರೆ ಮನೋಹರ ಮನಸ್ಸಿನಲ್ಲಿ ಅದರೆಲ್ಲ ವಿವರಗಳೊಂದಿಗೆ ಪುನಃ ಸೃಷ್ಟಿಯಾಗುತ್ತದೆ. ಇದಕ್ಕೆ ಕಾದಂಬರಿಯ ಕೊನೆಯಲ್ಲಿ ಅದೇ ಕಥೆಯನ್ನು ಕಶ್ಯಪನೇ ಕಥಿಸುವುದಕ್ಕೆ ಇರುವ ಔಚಿತ್ಯ ಮತ್ತು ಧ್ವನಿ ಶಕ್ತಿ ಕಾಣುವುದಿಲ್ಲ. ಹಾಗೆಯೇ ಸ್ವಾತಿಯ ಓದುವ ಮತ್ತು ಗೆರೆ ಎಳೆಯುವ ರೂಪಕವನ್ನು ತೀರ ವಾಚ್ಯವಾಗಿಸಿದ್ದರ ಉದ್ದೇಶ ಅರ್ಥವಾಗುವುದಿಲ್ಲ. ಹೀಗಿದ್ದೂ ಕಳಂಕಿತ ಮೂಲದ ವ್ಯಕ್ತಿಯೋರ್ವನ ಸಮಸ್ಯೆ ಮಾತ್ರ ಮಾನವ ಸಂಬಂಧಗಳ ಸಂಕೀರ್ಣತೆಯನ್ನು ಒಂದು ಅನುಭವವಾಗಿ ನೀಡುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ. ಅಧ್ಯಾಯಗಳ ವಿಂಗಡಣೆ ಧ್ವನಿಪೂರ್ಣವಾಗಿದೆ. (ಉದಾ: 'ಗಡಿ''ಯಲ್ಲಿ ಸ್ವಾತಿಯ ಸ್ವಾತಂತ್ರ್ಯ, ಶಂಕರನ ಆಂತರ್ಯದ ಗಡಿ, 'ಪರಕಾಯ''ದಲ್ಲಿ ಕಶ್ಯಪನ ಅಂತರಂಗವನ್ನು ಪ್ರವೇಶಿಸಲಾರದ ಮನೋಹರನ ಅಸಹಾಯಕತೆ - ಇತ್ಯಾದಿ ಧ್ವನಿತವಾಗುತ್ತವೆ) ಕಾದಂಬರಿಯುದ್ದಕ್ಕೂ ಕೇವಲ ಶುಷ್ಕ ವಿವರಗಳು ಬರದೆ ರೂಪಕ ಭಾಷೆಯಲ್ಲಿ ಅನುಭವಗಳು ಮೈದಾಳುವುದರಿಂದ ಕಶ್ಯಪನ ಸಮಸ್ಯೆಗಳಷ್ಟೇ ಅಲ್ಲ, ಕಾದಂಬರಿ ಹುಟ್ಟುಹಾಕುವ ಎಲ್ಲ ವಾಗ್ವಾದ ಸಂವಾದಗಳಿಗೆ ನಮಗೆ ನಿಲುಕದ ಇನ್ನೂ ಒಂದು ಆಯಾಮ, ಇನ್ನೂ ಒಂದು ಪರಿಹಾರದ ಸಾಧ್ಯತೆ ಕಾಣುತ್ತದೆ. ಒಟ್ಟಾರೆ, ಕೇವಲ ಘಟನಾವಳಿಗಳನ್ನು ಮನಸ್ಸಿನಲ್ಲಿ ಬಿತ್ತದೆ ಒಂದು ಕಾವ್ಯಾನುಭವವನ್ನು ಓದುಗರಲ್ಲಿ ಉದ್ದೀಪಿಸಲು ಹವಣಿಸುವ ಈ ಕೃತಿ ಕನ್ನಡ ಕಾದಂಬರಿಗಳಲ್ಲಿ ಅನನ್ಯವಾಗಿದೆ.

*❖ ವಿ. ಎಸ್. ಹೆಗಡೆ, ಗೋಕರ್ಣ*

## ಸಂಚಯದ ಪ್ರಕಟಣೆಗಳು













| | | | |
|---|---|---|---|
| 1) | ಗಾಜು (ಕವಿತೆಗಳು) | ವಿವಿಧ ಕವಿಗಳು | ರೂ. 8-00* |
| 2) | ಎ.ಕೆ. ರಾಮಾನುಜನ್ ಹೆಜ್ಜೆ ಗುರುತು | ವಿವಿಧ ಲೇಖಕರು | ರೂ. 1500* |
| 3) | ಸಿಕಾಡ (ಕವನ ಸಂಕಲನ) | ಜಿ. ಕೆ. ರವೀಂದ್ರಕುಮಾರ್ | ರೂ. 35-00 |
| 4) | ಡ್ರೀಮರ್ (ಕವಿತೆಗಳು) | ಡಿ. ವಿ. ಪ್ರಹ್ಲಾದ್ | ರೂ. 18-00 |
| 5) | ಅಭಿಮುಖ (ಲೇಖನಗಳು) | ಎನ್.ಎಸ್. ಶ್ರೀಧರಮೂರ್ತಿ | ರೂ. 20-00 |
| 6) | ಬಗೆ ತೆರೆದ ಬಾನು (ಸಾಹಿತಿಗಳ ಸಂದರ್ಶನಗಳು) | ಸಂ. ಡಿ. ವಿ. ಪ್ರಹ್ಲಾದ್ | ರೂ. 60-00 |
| 7) | ಚೌಕಟ್ಟು (ಸಮಕಾಲೀನ ದೃಶ್ಯಕಲೆ ಕುರಿತು) | ಸಂ. ಎಚ್.ಎ.ಅನಿಲ್‌ಕುಮಾರ್ | ರೂ. 25-00 |
| 8) | ಮೌನದ ಹೊತ್ತು (ಅನುವಾದಿತ ಕವಿತೆಗಳು) | ಸು. ರಂ. ಎಕ್ಕುಂಡಿ | ರೂ. 20-00 |
| 9) | ಕನಸು ಕೋಳಿಯ ಕತ್ತು (ಕವನಗಳು) | ಗೋವಿಂದ ಹೆಗಡೆ | ರೂ. 30-00 |
| 10) | ನಾಟಕ ಅಂತರಂಗ (ಲೇಖನಗಳು) | ಎ.ಆರ್. ನಾಗಭೂಷಣ | ರೂ. 40-00 |
| 11) | ಮುಕ್ತಛಂದ | ಶಾಂತಿನಾಥ ದೇಸಾಯಿ ನೆನಪಿನ ಸಂಪುಟ | ರೂ. 85-00 |
| 12) | ಕಂಬಾರರ ನಾಟಕಗಳು | ಸಂ. ವಿಕ್ರಮ ವಿಸಾಜಿ | ರೂ. 45-00 |
| 13) | ಅವಧೂತನೊಬ್ಬನ ರೂಪಾಂತರ | ಕಥಾ ಸಂಕಲನ | ರೂ. 30-00 |















*ಪ್ರತಿಗಳು ಮುಗಿದಿವೆ.

